# ಸಾಹಿತ್ಯ ಮತ್ತು ಚಿತ್ರಕಲೆ

ಎಂ. ವಿ. ಸೀತಾರಾಮಯ್ಯ



ಘವ ಪ್ರಕಾಶನ
ಬೆಂಗಳೂರು–೫೬೦ ೦೧೯

ಬೆಲೆ: ರೂ. ೫–೦೦

# ನಾಡೋಜ ಬಿ. ಎಂ. ಶ್ರೀ.

(ಒಂದು ಅಭಿಪ್ರಾಯ)

ಸುಪ್ರಸಿದ್ಧ ವಿದ್ವಾಂಸರೂ, ಸಂಶೋಧಕರೂ, ಕವಿಗಳೂ ಆಗಿರುವ ಪ್ರೊ॥ ಎಂ. ವಿ. ಸೀತಾರಾಮಯ್ಯನವರು ತಮ್ಮ ಗುರುಗಳಾದ, ನಾಡಿನ ಗುರುಗಳಾದ, ನಾಡೋಜ ಬಿ. ಎಂ. ಶ್ರೀ. ಅವರ ಬಗ್ಗೆ ವಸ್ತುನಿಷ್ಠವಾದ, ಅಭಿಮಾನಪೂರ್ಣವಾದ ಪುಸ್ತಕವನ್ನು ಹೊರತಂದಿದ್ದಾರೆ. ಶ್ರೀಯವರನ್ನು ಸಮೀಪದಿಂದ ನೋಡಿದ ಸೀತಾರಾಮಯ್ಯನವರು ಅವರ ಜೀವನ ಹಾಗು ನಿಲುವುಗಳ ಬಗ್ಗೆ ಈವರೆಗೂ ತಿಳಿದಿರದ ಅನೇಕ ಹೊಸ ಮಾತುಗಳನ್ನು ಹೇಳಿದ್ದಾರೆ. ಪಂಡಿತವರೇಣ್ಯ ಕಾನಕಾನಹಳ್ಳಿ ವರದಾಚಾರ್ಯರು ಕಲಿಸುತ್ತಿದ್ದ ರೀವಿ, ಅವರ ಬಗೆಗೆ ಶ್ರೀ ಅವರು ಇಟ್ಟುಕೊಂಡಿದ್ದ ಗುರುಭಕ್ತಿ, ಕರ್ಣಾಟಕ–ಕರ್ನಾಟಕ ಪ್ರಕರಣದಲ್ಲಿ ಶ್ರೀ ಅವರು ತಾಳಿದ ನಿಲುವು ಹಾಗು ಸ್ವತಃ ತಮ್ಮ ಗುರುಗಳೇ ಆಗಿದ್ದ ವೆಂಕಟನಾರಾಯಣಪ್ಪನವರನ್ನು ಎದುರಿಸಿದ ರೀತಿ, ಪಂಡಿತಾಭಿಮುಖವಾಗಿದ್ದ ಕನ್ನಡ ಸಾಹಿತ್ಯ ಪರಿಷತ್ತನ್ನು ಜನಾಭಿಮುಖವಾಗಿ ಮಾಡಿದ ದೊಡ್ಡ ಕೆಲಸ, ಸಾಹಿತ್ಯ ಚರಿತ್ರೆಗೆ ರಸ ತುಂಬಿ ಪಾಠ ಮಾಡುತ್ತಿದ್ದ ಕ್ರಮ–ಇವೆಲ್ಲ ಕಣ್ಣೆದುರಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ ಪ್ರೊ॥ ಸೀತಾರಾಮಯ್ಯನವರು. ಬಿ. ಎಂ. ಶ್ರೀ. ಪ್ರತಿಷ್ಠಾನದ ಕಾರ್ಯದರ್ಶಿಗಳಾಗಿ ಪ್ರೊ॥ ಸೀತಾರಾಮಯ್ಯನವರು ಗೈಯುತ್ತಿರುವ ಕೈಂಕರ್ಯ ಶ್ರೀಯವರ ಘನತೆಗೆ ತಕ್ಕುದೇ ಆಗಿದೆ. ಇಷ್ಟೆಲ್ಲ ಭಕ್ತಿ ಭಾವ ಶ್ರೀಯವರ ಬಗ್ಗೆ ಲೇಖಕರಿಗೆ ಇದ್ದರೂ, ಈ ಅಭಿಮಾನ ಆವೇಶವಾಗಿಲ್ಲ; ಬುದ್ಧಿಶಕ್ತಿ ಜೋಲಿ ತಪ್ಪಿಲ್ಲ; ವಸ್ತುನಿಷ್ಠ ಹವಣು ಪುಸ್ತಕದ ಉದ್ದಕ್ಕೂ ಕಂಡುಬರುತ್ತಿದೆ. 'ನಾಡೋಜ ಬಿ.ಎಂ.ಶ್ರೀ.' ಸತ್‌ಶಿಷ್ಯನೊಬ್ಬ ಮಹಾಗುರುವಿಗೆ ಸಲ್ಲಿಸಿದ ಯೋಗ್ಯವಾದ ಗುರುದಕ್ಷಿಣೆ.

ಡಾ॥ ರಾ. ಯ. ಧಾರವಾಡಕರ

# ಸಾಹಿತ್ಯ ಮತ್ತು ಚಿತ್ರಕಲೆ

(ಒಂದು ಉಪನ್ಯಾಸ)

ಎಂ. ವಿ. ಸೀತಾರಾಮಯ್ಯ



ರಾಘವ ಪ್ರಕಾಶನ
೫೪, ಅರವಿಂದ, ೩ನೆಯ ಅಡ್ಡಬೀದಿ
ಗವಿಪುರಂ ವಿಸ್ತರಣ
ಬೆಂಗಳೂರು–೫೬೦ ೦೧೯

# ಬಿನ್ನಹ

ಮೈಸೂರು ಮಹಾರಾಜರವರ ಕಾಲೇಜಿನಲ್ಲಿ ಕರ್ಣಾಟಕ ಸಂಘ ಅಂದಿನ ತರುಣ ಕವಿಗಳನ್ನೂ ಬರಹಗಾರರನ್ನೂ ವಾಗ್ಮಿಗಳನ್ನೂ ನಟರನ್ನೂ ಗಮಕಿ ಗಳನ್ನೂ ಬೆಳಕಿಗೆ ತಂದು ಅವರುಗಳ ಭವಿಷ್ಯವನ್ನು ರೂಪಿಸುವುದರಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿತ್ತು. ಕನ್ನಡ ನವೋದಯ ಸಾಹಿತ್ಯದ ಪ್ರವರ್ತಕರಾದ ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರೂ ಪ್ರೊಫೆಸರ್ ಟಿ. ಎಸ್. ವೆಂಕಣ್ಣಯ್ಯನವರೂ ಸಂಘದ ಸ್ಫೂರ್ತಿಕೇಂದ್ರವಾಗಿದ್ದರು. ಕನ್ನಡ ಅಧ್ಯಾಪಕ ದಿವಂಗತ ತೀ. ನಂ. ಶ್ರೀ., ಆಗ ಇಂಗ್ಲಿಷ್ ಅಧ್ಯಾಪಕರಾಗಿದ್ದ ಶ್ರೀ ಎ. ಎನ್. ಮೂರ್ತಿರಾವ್, ಎಸ್. ಎಸ್. ನಾರಾಯಣಶಾಸ್ತ್ರೀ, ಇವರೇ ಮುಂತಾದ ಅಧ್ಯಾಪಕವರ್ಗದವರು ವಿದ್ಯಾರ್ಥಿಗಳಲ್ಲಿ ಹುದುಗಿದ್ದ ಸಾಹಿತ್ಯ-ಕಲಾಪ್ರತಿಭೆಯನ್ನು ಗುರುತಿಸಿ ಬಿ.ಎಂ.ಶ್ರೀ. ಮತ್ತು ಟಿ.ಎಸ್.ವೆಂ. ಇವರ ಗಮನಕ್ಕೆ ತಂದು ಉತ್ತೇಜನ ಕೊಡುವಲ್ಲಿ ತುಂಬ ಆಸಕ್ತಿವಹಿಸಿ, ವಿದ್ಯಾರ್ಥಿ ಗಳಿಗೆ ಮಾರ್ಗದರ್ಶನಮಾಡುತ್ತಿದ್ದರು. ವಿದ್ಯಾರ್ಥಿ ಕಾರ್ಯದರ್ಶಿಗಳಾಗಿದ್ದ ದಿವಂಗತ ಬಿ. ಆರ್. ಪುಟ್ಟನಂಜಪ್ಪ, ಶ್ರೀತಾಂಡವೇಶ್ವರ, ಮು. ಪು. ಲಕ್ಷ್ಮೀ ನರಸಿಂಹಶಾಸ್ತ್ರಿ (ಎಂ.ಪಿ.ಎಲ್. ಶಾಸ್ತ್ರಿ)—ಇವರ ಉತ್ಸಾಹಶಕ್ತಿ ಸಂಘವನ್ನು ಮುನ್ನಡೆಸುತ್ತಿತ್ತು. ಸಂಘದ ಸದಸ್ಯರಾಗಿದ್ದ ತರುಣ ಕನ್ನಡ ಕವಿಗಳ ಕವನ ಗಳನ್ನುಳ್ಳ 'ಕಿರಿಯ ಕಾಣಿಕೆ', 'ತಳಿರು' ಕವನಸಂಕಲನಗಳು ಪ್ರಕಟವಾದದ್ದು ಈ ಕಾಲದಲ್ಲೆ (ಸು. 1928–1932) ; 'ಅಶ್ವತ್ಥಾಮನ್', 'ಗದಾಯುದ್ಧ ನಾಟಕಂ', 'ಆಷಾಢಭೂತಿ', 'ಸಾವಿನ ಸಮಸ್ಯೆ', ಮುಂತಾದ ನಾಟಕಗಳ ಅಭಿನಯ ; ಕುಮಾರವ್ಯಾಸ ಜಯಂತಿ ; 'ಕುಮಾರವ್ಯಾಸ ಪ್ರಶಸ್ತಿ' ಗ್ರಂಥ ಪ್ರಕಟನೆ ; ಕನ್ನಡ ಸಾಹಿತ್ಯ ಸಮ್ಮೇಳನ–ಈ ಎಲ್ಲ ಕಾರ್ಯಕಲಾಪಗಳಲ್ಲೂ ಸಂಘದ ಸದಸ್ಯರ ಪಾತ್ರ ನವೋದಯ ಯುಗದ ನಿರ್ಮಾಣಕಾರ್ಯದಲ್ಲಿ ತಕ್ಕಮಟ್ಟಿಗೆ ಗಮನಾರ್ಹವಾಗಿತ್ತು. ಒಬ್ಬ ತರುಣ ಕವಿಯಾಗಿ, ಪ್ರಬಂಧ ಕಾರನಾಗಿ, ನಾನು ಮೊತ್ತಮೊದಲು ಬೆಳಕಿಗೆ ಬಂದದ್ದು ಈ ಸಂಘದ ಕೃಪಾಶ್ರಯದಲ್ಲಿ–ಗುರುವೃಂದದ ಆಶೀರ್ವಾದ ಶ್ರೀರಕ್ಷೆ, ಸಹೃದಯ ಮಿತ್ರರ ಉತ್ತೇಜನ, ಇವುಗಳಿಂದ ಪೋಷಿತನಾಗಿ.

ನಾನು ಜೂನಿಯರ್ ಬಿ. ಎ. ತರಗತಿಯ ವಿದ್ಯಾರ್ಥಿಯಾಗಿದ್ದಾಗ (1930) ಈ ಪ್ರಬಂಧವನ್ನು ಕರ್ಣಾಟಕ ಸಂಘದ ಆಶ್ರಯದಲ್ಲಿ ವಾಚನ ಮಾಡಿದೆನು ; ಪ್ರೊ॥ ಮೂರ್ತಿರಾಯರು ಅಂದು ಸಭಾಧ್ಯಕ್ಷರಾಗಿದ್ದುಕೊಂಡು ಉತ್ತೇಜನಕರವಾದ ಮಾತುಗಳನ್ನಾಡಿ ಆಶೀರ್ವಾದ ಮಾಡಿದ್ದು ಮಾತ್ರವಲ್ಲದೆ, ತಮ್ಮ ಮಿತ್ರರಾದ (ದಿವಂಗತ) ಬಿ. ಚಂದ್ರಶೇಖರ ಶರ್ಮ ಅವರು ಬೊಂಬಾಯಿಯಿಂದ ಪ್ರಕಟಿಸುತ್ತಿದ್ದ 'ಪ್ರಬೋಧಕ' ಮಾಸಪತ್ರಿಕೆಯಲ್ಲಿ ಪ್ರಕಟನೆ ಆಗುವಂತೆ ಅವಕಾಶವನ್ನು ಕಲ್ಪಿಸಿಕೊಟ್ಟರು. ಇವರ ಮಹೋಪಕಾರ ವನ್ನು ಅತ್ಯಂತ ಕೃತಜ್ಞತೆಯಿಂದ ನೆನೆಯುತ್ತೇನೆ.

1929ರಲ್ಲಿಯೇ (ಎಂದರೆ ನಾನು ಸೀನಿಯರ್ ಇಂಟರ್ ತರಗತಿ ಯಲ್ಲಿದ್ದಾಗ) ಈ ಪ್ರಬಂಧವನ್ನು ರಚಿಸಿ, ತೀ.ನಂ.ಶ್ರೀ. ಅವರಿಗೆ ತೋರಿಸಿದ್ದೆ. ಏನು ಬರೆದರೂ ಮುಂಚೆ ಅವರಿಗೆ ತೋರಿಸಿ, ಅವರು ಮೆಚ್ಚುಗೆ ವ್ಯಕ್ತಪಡಿಸಿ ದರೆ ಮಾತ್ರ ಬರಹವನ್ನು ಅವಕಾಶ ದೊರೆತಾಗ ಬೆಳಕಿಗೆ ತರುತ್ತಿದ್ದೆ. ಈ ಪ್ರಬಂಧವನ್ನು ಪರಿಶೀಲಿಸಿ, ಸೂಕ್ತ ಸಲಹೆ ಸೂಚನೆ ಕೊಟ್ಟು, ಪ್ರಬಂಧದ ಮಟ್ಟ ಉತ್ತಮವಾಗಲು ಅವರು ನೆರವಾಗಿದ್ದರು. ಅಗತ್ಯವಾಗಿದ್ದ ಪುಸ್ತಕ ಗಳನ್ನು ಎರವಲು ಕೊಟ್ಟಿದ್ದರು. ನನ್ನ ಮಾರ್ಗದರ್ಶಕರಾಗಿದ್ದ ಅವರ ಉಪಕಾರ ಗಳನ್ನು ಎಷ್ಟು ನೆನೆದರೂ ಕಡಮೆಯೇ.

ಇದನ್ನು ಪ್ರಕಟಿಸಿ ಉಪಕಾರ ಮಾಡಿದವರು ನನ್ನ ಷಡ್ಡಕರೇ ಆಗಿದ್ದ ಬಿ. ಚಂದ್ರಶೇಖರಯ್ಯನವರು (ಬೊಂಬಾಯಿಯಲ್ಲಿ ಚಂದ್ರಶೇಖರ ಶರ್ಮ ಆಗಿ ದ್ದರು) ಎನ್ನುವುದು ನನಗೆ ಗೊತ್ತೇ ಇರಲಿಲ್ಲ ! ಈ ಪ್ರಬಂಧವನ್ನು ಬಾಂಧವ್ಯಕ್ಕೆ ಕಟ್ಟುಬಿದ್ದು ಪ್ರಕಟಿಸಿಲ್ಲ ಎಂದು ನನ್ನ ನಂಬಿಕೆ. ಅರ್ಧಶತಮಾನಕ್ಕೂ ಹಿಂದೆ ಬರೆದು ಪ್ರಕಟವಾಗಿದ್ದ ಈ ಪ್ರಬಂಧ ಹಳಸಾಗಿಲ್ಲ ಎಂದು ತೋರಿದ್ದರಿಂದ, ಪ್ರಕಟಿಸುವ ಧೈರ್ಯಮಾಡಿ, ಸಹೃದಯರ ಗಮನಕ್ಕೆ ತರುತ್ತಿದ್ದೇನೆ. ಬರಹದ ಉಪನ್ಯಾಸ ಧಾಟಿಯನ್ನು ಬದಲಾಯಿಸಹೋಗಿಲ್ಲ.

ಈ ಪುಸ್ತಿಕೆಯನ್ನು ಅತ್ಯಲ್ಪಕಾಲದಲ್ಲಿ ಚೆನ್ನಾಗಿ ಮುದ್ರಿಸಿಕೊಟ್ಟ ಶ್ರೀ ಲಕ್ಷ್ಮೀ ಪ್ರಿಂಟರ್ಸ್ ಅವರಿಗೆ ನನ್ನ ವಂದನೆಗಳು.

೩೧–೩–೧೯೮೫ —ಎಂ. ವಿ. ಸೀ.
ಬೆಂಗಳೂರು–೧೯

# ಸಾಹಿತ್ಯ ಮತ್ತು ಚಿತ್ರಕಲೆ

ಸಾಹಿತ್ಯವು ಮಾತಿನಿಂದ ವ್ಯಕ್ತಪಡಿಸುವುದನ್ನೇ ಚಿತ್ರಕಲೆ ಬಣ್ಣದಿಂದ ವ್ಯಕ್ತಪಡಿಸುವುದೆಂದು ಅನೇಕರ ಮತ. ಅಂದರೆ, ಕವಿಯ ಕೆಲಸವೂ ಚಿತ್ರಗಾರನ ಕೆಲಸವೂ ಒಂದೇ ಎಂದು. ಈ ಅರ್ಥವನ್ನು ಸ್ಪಷ್ಟಪಡಿಸಿ, ಚಿತ್ರಕಲೆ ಸಾಹಿತ್ಯದಿಂದ ಎಷ್ಟರಮಟ್ಟಿಗೆ ಭಿನ್ನವಾಗಿದೆ ಎಂಬುದನ್ನು ತಿಳಿಸುವುದೇ ಈ ಲೇಖನದ ಉದ್ದೇಶ.

ಸಾಹಿತ್ಯಪ್ರಪಂಚದಲ್ಲಿ ನಾನಿನ್ನೂ ಹಸುಳೆ; ಸಾಹಿತ್ಯದ ಸೇವೆಯನ್ನು ಮಾಡುವುದು ಹಾಗಿರಲಿ, ನಮ್ಮ ಜೀವಮಾನವೆಲ್ಲಾ ಓದಿದರೂ ಮುಗಿಯದ ಸಾಹಿತ್ಯದಲ್ಲಿ ಒಂದು ತಿಲಾಂಶವನ್ನಾದರೂ ಚೆನ್ನಾಗಿ ಗ್ರಹಿಸಿಕೊಳ್ಳುವುದಕ್ಕಾಗಿಲ್ಲ. ಮಾಡಿರುವ ಅಡಿಗೆಯ ರುಚಿಯನ್ನೇ ಹೇಳುವುದಕ್ಕೆ ತಿಳಿಯದು; ಇನ್ನು ಅಡಿಗೆಯನ್ನು ಮಾಡುವುದು ಹೇಗೆ? ಚಿತ್ರಕಲೆಯ ವಿಷಯದಲ್ಲಿಯೂ ಹೀಗೆಯೇ. ಏನೋ ಒಂದು ಕೋಳಿ, ಕೊಕ್ರೆ ಬರೆಯುವುದಕ್ಕೆ ಬರುತ್ತದೆ ಅಷ್ಟೆ. ಚಿತ್ರಕಲೆಯ ಒಂದು ಕಿರಣವಾದರೂ ನನ್ನ ಹೃದಯದಲ್ಲಿ ಬೆಳಗುತ್ತಿಲ್ಲ. ಆದರೂ ಸಾಹಿತ್ಯದಲ್ಲೂ ಚಿತ್ರಕಲೆಯಲ್ಲೂ ನುರಿತವರು ಹೇಳುವ ಮಾತನ್ನು ಕೇಳಿರುತ್ತೇನೆ, ಅವರ ಅಭಿಪ್ರಾಯವನ್ನೇ ನಾನು ಹೇಳುವುದು. ಎರಡರಲ್ಲೂ ನುರಿತು ಸುಪ್ರಸಿದ್ಧರಾಗಿರುವವರನೇಕರಿದ್ದಾರೆ. ಎಲ್ಲರಿಗೂ ತಿಳಿದಿರಬಹುದು-Hazlitt ಮತ್ತು John Ruskin ರವರು.

ಪ್ರಕೃತಿ ಸೌಂದರ್ಯ—ಪ್ರಪಂಚದಲ್ಲಿ ಸುಖದುಃಖಾದಿರೂಪವಾಗಿ ಕಂಡು ಬರುವ ಘಟನೆಗಳು—ಇವುಗಳ ಅನುಭವವು ಸಾಮಾನ್ಯವಾಗಿ ಎಲ್ಲರಮೇಲೂ ಹೆಚ್ಚುಕಡಿಮೆಯಾಗಿ ಒಂದೇ ವಿಧವಾದ ಪರಿಣಾಮವನ್ನುಂಟುಮಾಡುತ್ತದೆ. ಅನುಭವಶಕ್ತಿ ಹೆಚ್ಚಾಗಿದ್ದಷ್ಟೂ ಈ ಪರಿಣಾಮವೂ ಹೆಚ್ಚು. ಅನುಭವಶಕ್ತಿ ಹೆಚ್ಚಾಗಿದ್ದಷ್ಟೂ, ಅನುಭವವೂ ಹೆಚ್ಚಿ ಆ ಅನುಭವವನ್ನು ಇನ್ನೊಬ್ಬರಿಗೆ ಹೇಳಿದ ಹೊರತು ಮನಸ್ಸಿಗೆ ತೃಪ್ತಿಯಿಲ್ಲ, ಒಂದು ಉದಾಹರಣೆಯನ್ನು ತೆಗೆದುಕೊಳ್ಳೋಣ. ಒಳ್ಳೆ ಹುಣ್ಣಿಮೆ; ಮೂಡಲಿನಲ್ಲಿ ಹುಣ್ಣಿಮೆ ಚಂದ್ರನು ಬೆಳಗುತ್ತಿದ್ದಾನೆ; ಇಬ್ಬರು ಗೆಳೆಯರು ಸಂಚಾರ ಹೊರಟಿರುತ್ತಾರೆ. ಒಬ್ಬನು ಚಂದ್ರನನ್ನು ನೋಡಿ–"ನೋಡಿದೆಯಾ, ಚಂದ್ರನು ಆಕಾಶದಲ್ಲಿ ಕನ್ನಡಿಯಂತೆ

ಹೇಗೆ ಥಳಥಳಿಸುತ್ತಿದ್ದಾನೆ!" ಎಂದು ತನ್ನ ಗೆಳೆಯನಿಗೆ ಹೇಳುತ್ತಾನೆ. ಇನ್ನೊಬ್ಬನು ಸುಮ್ಮನಿರುತ್ತಾನೆ. ಅವನೇಕೆ ಹಾಗೆ ಹೇಳಬಾರದಾಗಿತ್ತು? ಮೊದಲನೆಯವನಿಗೆ ಅನುಭವಶಕ್ತಿ ಹೆಚ್ಚು. ಆ ಅನುಭವಶಕ್ತಿಯನ್ನು ಏನೆಂದಾದರೂ ಕರೆಯಿರಿ. ಅನುಭವವು ಅಧಿಕವಾದುದರಿಂದ, ಆ ಅನುಭವಕ್ಕೆ ರೂಪುಗೊಡತಕ್ಕ ಬೇರೊಂದು ಕಲ್ಪನಾಶಕ್ತಿಯಿರುವುದರಿಂದ, ಅವನು ತನ್ನ ಅನುಭವವನ್ನು ವ್ಯಕ್ತಪಡಿಸುವುದಕ್ಕೆ ಸಾಧ್ಯವಾಯಿತು. ಎರಡನೆಯವನೂ ತಿಂಗಳ ಬೆಳಕಿನಲ್ಲಿ ಮಿಂದು ಸಂತಸಪಟ್ಟಿರಬೇಕು. ಮೊದಲನೆಯವನಷ್ಟು ಅಲ್ಲದೇಹೋದರೆ, ಸ್ವಲ್ಪವಾದರೂ ಆ ಸಂತೋಷವೇನೆನ್ನುವುದನ್ನು ಅನುಭವಿಸಿರಬೇಕು. ಆದರೆ ಆ ಅನುಭವಕ್ಕೆ ರೂಪುಗೊಡುವುದಕ್ಕೆ ಇವನಿಗೆ ಕಲ್ಪನಾಶಕ್ತಿಯಿಲ್ಲ. ಹೇಳುವುದಕ್ಕೆ ಬಾಯಿಲ್ಲ.

ಹೀಗೆ ತನ್ನ ಅನುಭವವನ್ನು ಇತರರಿಗೆ ಹೇಳಬೇಕೆಂಬುದು ಮಾನವನ ಸಾಮಾನ್ಯಗುಣ. ತನ್ನ ಅನುಭವವನ್ನು, ತನ್ನ ಆಸೆ ಕನಸುಗಳನ್ನು ಮನುಷ್ಯನು ತನ್ನ ಹೃದಯದಲ್ಲೇ ಹೆಚ್ಚು ಕಾಲ ಬಚ್ಚಿಟ್ಟುಕೊಳ್ಳಲಾರ. ಇತರರಿಗೆ ಹೇಳಬೇಕಾಗುವ ಸಂದರ್ಭವು ಅವನಿಗೆ ಅಗತ್ಯವಾಗುತ್ತದೆ. ಅನುಭವಶಕ್ತಿಯೂ ಹೆಚ್ಚಾಗಿದ್ದು, ಕಲ್ಪನಾಶಕ್ತಿಯೂ ಇರುವವರಿಗೆ ಇಂಥ ಅನೇಕ ಸಂದರ್ಭಗಳು ಒದಗಿದಾಗ, ಹತ್ತಿರದಲ್ಲಿ ಯಾರಾದರೂ ಇದ್ದರೆ ಸರಿ, ಇಲ್ಲದಿದ್ದರೆ ಏನುಮಾಡುವುದು? ತನ್ನಷ್ಟಿಗೆ ತಾನೇ ಹೇಳಿಕೊಳ್ಳುವುದೇ? ಹಾಗೆ ಮಾಡಿದರೆ, ಅಕಸ್ಮಾತ್ ಅವನ ನುಡಿಗಳನ್ನು ಯಾರಾದರೂ ಕೇಳಿದರೆ ಅವನನ್ನು ಹುಚ್ಚ ಎನ್ನುತ್ತಾರೆ. ಸುಮ್ಮನಿರುವುದಕ್ಕಾಗುವುದೇ ಇಲ್ಲ—ಹೆಂಡತಿ ಬಹಳ ಸುಂದರಿ. ಅವಳಿಗದು ಗೊತ್ತೇ ಇದೆ. ಆದರೂ 'ನಾನು ಸುಂದರಿಯೇ ನಿಜವಾಗಲೂ' ಎಂಬ ಅನುಮಾನವಿರಬಹುದು. ಗಂಡನು ಹೆಂಡತಿಯೊಡನೆ—"ನೀ ಬಹಳ ಚೆನ್ನಾಗಿದೀ ಕಣೆ, ನಿನ್ನ ಬಿಟ್ಟರಿಲ್ಲ" ಎಂದು ಏಕೆ ಹೇಳಬೇಕು? ಹಾಗೆ ಮನಸ್ಸಿನಲ್ಲಿ ಅರಿತುಕೊಂಡು ಸುಖಪಟ್ಟರೆ ಸಾಲದೆ? ಅಥವಾ ಇದನ್ನು ಕೇಳಿ: ನಮ್ಮ ತಾಯಿಗೆ ಸುಮಾರಾಗಿ ಕಾಫಿ ಕಾಸುವುದಕ್ಕೆ ಬರುತ್ತದೆ. ಒಂದು ದಿವಸ ಬಹಳ ಚೆನ್ನಾಗಿ ಕಾಸಿದ್ದರು, ಕುಡಿದೆ, ಬಹಳ ಚೆನ್ನಾಗಿತ್ತು. ಎಷ್ಟು ಸಲ ಬಹಳ ಚೆನ್ನಾಗಿದೆ ಎಂದುಕೊಂಡರೂ ಮನಸ್ಸಿಗೆ ತೃಪ್ತಿಯಿಲ್ಲ. ತಾಯಿಯೊಡನೆ-"ಅಮ್ಮ ಇವತ್ತು ಕಾಫಿ ಬಹಳ ಸೊಗಸಾಗಿದೆ"

ಎಂದೆ. ನಮ್ಮಮ್ಮನಿಗೆ ಬಲು ಸಂತೋಷವಾಯಿತು. ನನಗೂ ತೃಪ್ತಿಯಾಯಿತು. ಕುಡಿದ ಕಾಫಿ ಮೈ ಅಂಟಿತು. ಸಂತೋಷದ ಭರದಲ್ಲಿ ನನ್ನ ತಾಯಿ ನನಗಿನ್ನೊಂದು ಬಟ್ಟಲು ಕಾಫಿ ಹಾಕಿದರು. ನನಗಿನ್ನೂ ತೃಪ್ತಿಯಾಯಿತು. ಸಾಮಾನ್ಯವಾದ ಕಾಫಿಯ ವಿಚಾರದಲ್ಲಿಯೇ ಹೀಗಾದಮೇಲೆ ಇನ್ನು ಅಗಾಧವಾದ, ಸೌಂದರ್ಯದ ಸಾರವನ್ನು ಸೂಸುವ, ಸತ್ಯದ ಬೆಳಕನ್ನು ಬೀರುವ, ನೊಂದವರ ಕಣ್ಣೀರೊರಸುವ, ಕೆಚ್ಚೆದೆಯ ಕೆಚ್ಚನ್ನು ಹೆಚ್ಚಿಸುವ–ಅನುಭವ ವಿಶೇಷಗಳಾದ ಭಾವಗಳು ಹಕ್ಕಿಗಳಂತೆ ಬಗೆಯ ಬಾನಿನಲ್ಲಿ ಹಾರುತ್ತಿರುವಾಗ, ಅವು ತಪ್ಪಿಸಿಕೊಂಡು ಹಾರಿಹೋದರೂ ಆಯ್ತು, ಮಾಯವಾದರೂ ಆಯ್ತು ಎನ್ನುವ ಸ್ಥಿತಿಯಲ್ಲಿರುವಾಗ, ಅವನ್ನು ಹಿಡಿದು ನಿಲ್ಲಿಸಿ ಇತರರಿಗೆ ಪ್ರಕಾಶಗೊಳಿಸಬೇಕಾದರೆ ಒಂದು ಬಲೆಯೇ ಬೇಕು—ಕಾಫಿ ಚೆನ್ನಾಗಿದೆ ಎನ್ನುವ ಒಂದೆರಡು ಮಾತುಗಳು ಸಾಲವು. ಅಂಥ ಬಲೆ ಎರಡು ವಿಧವಾದುದು—ಒಂದು ಮಾತಿನದು ; ಇನ್ನೊಂದು ಬಣ್ಣದ್ದು. ಮಾತಿನ ಶಕ್ತಿಯುಳ್ಳವನು ಮಾತಿನಲ್ಲಿ ಬರೆಯುತ್ತಾನೆ. ಅವನು ಕವಿ ; ಅವನ ಕುಶಲಕರ್ಮವೇ ಸಾಹಿತ್ಯ. ಬಣ್ಣಗೆಲಸಮಾಡಲು ಶಕ್ತಿಯುಳ್ಳವನು ಬಣ್ಣದಲ್ಲಿ ಚಿತ್ರಿಸುತ್ತಾನೆ, ಅವನು ಚಿತ್ರಗಾರ ; ಅವನ ಕುಶಲಕರ್ಮ ಚಿತ್ರಕಲೆ.

ಹೀಗೆ ಚಿತ್ರಕಲೆಯೂ ಸಾಹಿತ್ಯವೂ ಸ್ವಾನುಭವಪ್ರಕಾಶಕ್ಕೆ ಎರಡು ಬೇರೆ ಬೇರೆ ದಾರಿಗಳು. ಎರಡರ ಕೆಲಸವೂ ಒಂದೆ. ಎರಡರ ಉತ್ಪತ್ತಿಗೂ ಮೂಲಕಾರಣ ಒಂದೆ. ಕವಿಯು ಕವಿಯಾಗುವುದಕ್ಕೆ ಮೊದಲು ಪ್ರತಿಭಾಶಾಲಿಯಾಗಿರಬೇಕು. ಅವನಿಗೆ ತನ್ನಲ್ಲಿ ಪ್ರತಿಭೆಯಿದೆಯೆನ್ನುವುದು ಗೊತ್ತಿರುವುದಿಲ್ಲವೆಂದೇ ನನ್ನ ಭಾವನೆ. ಆ ಪ್ರತಿಭೆ "ಪೆಟ್ರೋಲಿ"ನಂತೆ ಕವಿಯಲ್ಲಿ (ಅಥವಾ ಚಿತ್ರಗಾರನಲ್ಲಿ) ಸಂಸ್ಕಾರಗತವಾಗಿ ಹುದುಗಿಕೊಂಡಿರುತ್ತದೆ. ಅವನು ಕಾವ್ಯವನ್ನು ಬರೆಯಬೇಕೆಂದು ಪ್ರಯತ್ನಪಟ್ಟು ಬರೆಯುವುದಿಲ್ಲ. ಪ್ರಯತ್ನಪಟ್ಟರೆ ಆಗುವುದೂ ಇಲ್ಲ. ಆದರೆ ಬರಿಯ ಪ್ರತಿಭೆಯೊಂದೇ ಸಾಲದು ಕಾವ್ಯ ರಚನೆಗೆ. ಆವರಣ ಪ್ರಭಾವವಿಲ್ಲದೆ ಕಾವ್ಯ ಉದಯಿಸುವುದಿಲ್ಲ. ಆವರಣ-ಸನ್ನಿವೇಶಗಳ ಪ್ರಭಾವವು ಆ ಪ್ರತಿಭೆಗೆ–ಆ ಪೆಟ್ರೋಲಿಗೆ ಸೋಕಿದರೆ ಸಾಕು, ಭುಗ್ ಎಂದು ಜ್ವಾಲೆ ಪ್ರಜ್ವಲಿಸುತ್ತದೆ. ಇದೇ ಆವೇಶವೆಂದು ನನಗೆ

ತೋರುತ್ತದೆ. ಆದರೆ ಆವೇಶ ಉಂಟಾದ ಕ್ಷಣದಲ್ಲಿಯೇ ಕಾವ್ಯೋತ್ಪತ್ತಿಯಾಗುವುದಿಲ್ಲ. ಆ ಆವೇಶವು ಹೃದಯದಲ್ಲಿಯೇ ಇದ್ದು ಹೃದಯವನ್ನು ಕಲಕಿಬಿಡುತ್ತದೆ. ಆ ಸ್ಥಿತಿಯನ್ನು ರಸ್ಕಿನ್ನನು "awful and inspired unconsciousness" ಎಂದು ಕರೆಯುತ್ತಾನೆ. ಆ ಸ್ಥಿತಿಯಲ್ಲೇ ಕಾವ್ಯ-ಪ್ರೇರಣೆಯಾಗುವುದು. ಕಾವ್ಯವನ್ನು ಬರೆಯುವತನಕ ಹೃದಯದಲ್ಲಿ ಒಂದು ವಿಧವಾದ ವೇದನೆ, ಆತಂಕ. ಬರೆದಮೇಲೆ ಒಂದು ದೊಡ್ಡ ಹೊರೆಯೇ ಕಳಚಿದಂತೆ ಉಲ್ಲಾಸ. ಆ ಆವೇಶಾಗ್ನಿ ಆರದಂತೆ ಕಲ್ಪನಾಶಕ್ತಿ ವಿಧವಿಧವಾಗಿ ತುಪ್ಪವೆರೆದು ಅದನ್ನು ಪೋಷಿಸುತ್ತದೆ. ಆಮೇಲೆ ಒಮ್ಮೆಯೇ, ರೆಕ್ಕೆ ಬಲಿತ ಹಕ್ಕಿಯು ಮರಿ ಬಾನಿಗೇರುವಂತೆ, ಧಡಧಡನೆ ಅಡ್ಡಮಳೆ ಸುರಿಯುವಂತೆ, ಕಾವ್ಯವು ತಾನೇತಾನಾಗಿ ಸರಸರನೆ ಬಂದುಬಿಡುತ್ತದೆ. ಅದನ್ನು ತಡೆಯಲು ಕವಿಗೂ ಅಸಾಧ್ಯ. ಚಿತ್ರಗಳ ವಿಷಯದಲ್ಲಿಯೂ ಹೀಗೆಯೇ.

ಸಾಹಿತ್ಯ–ಚಿತ್ರಕಲೆ ಇವು ಹೇಗೆ ಒಂದೇ ರೀತಿಯಲ್ಲಿ ಹುಟ್ಟುತ್ತವೆ ಎಂಬುದನ್ನು ವಿವರಿಸಿದುದಾಯಿತು. ಅವು ಜನಿಸಿದುದು ಯಾವಾಗ? ಸ್ವಲ್ಪ ವಿಚಾರಿಸೋಣ. ಯಾವಾಗ ಮನುಷ್ಯನು ಪ್ರಾಣಿವರ್ಗದಲ್ಲಿ ತನ್ನ ಮೇಲ್ಮೆಯನ್ನು ಸ್ಥಾಪಿಸುವುದಕ್ಕೆ ಮೊದಲುಮಾಡಿದನೋ ಅಂದು ಅವನಿಗೆ ತನ್ನ ಜತೆಗಾರರ ಬೆಂಬಲವು ಆವಶ್ಯಕವಾಗಿ ಅವರದೊಂದು ಗುಂಪಾಯಿತು. ಅವರಲ್ಲಿ ಮಾತಿಗಿಂತಲೂ ಮೊದಲು ಸನ್ನೆಯಿತ್ತೆಂದೂ, ಮಾನವಜಾತಿಯಲ್ಲಿ ಪರಸ್ಪರ ಸಂಬಂಧ ಹೆಚ್ಚಿದಹಾಗೆಲ್ಲಾ ತಮ್ಮ ಭಾವವನ್ನು ವ್ಯಕ್ತಪಡಿಸುವುದು ಆವಶ್ಯಕವಾಗಿ ಆ ಸನ್ನೆಗಳನ್ನು ತಮಗೆ ಹೆಚ್ಚು ಪರಿಚಯವಾದ ವಸ್ತುಗಳಿಂದ ಚಿತ್ರಿಸಿ ತೋರಿಸುತ್ತಿದ್ದರೆಂದೂ, ಕ್ರಮೇಣ ಮಾತನಾಡುವುದು ರೂಢಿಗೆ ಬಂದು, ಆ ಚಿತ್ರದ ಬರೆವಣಿಗೆ ಸಾಮಾನ್ಯ ಭಾವಗಳನ್ನೂ ಇಚ್ಛೆಗಳನ್ನೂ ವ್ಯಕ್ತಪಡಿಸುವುದಕ್ಕೆ ಅನಾವಶ್ಯಕವಾಗಿ ಮೂಲೆಗೆ ಬೀಳುವ ಸಮಯದಲ್ಲಿ ಅದು ಚಿತ್ರಕಲೆಯಾಗಿ ನಿಂತಿತೆಂದೂ ಸಕಾರಣವಾಗಿ ಊಹಿಸಬಹುದಾಗಿದೆ. ಚಿತ್ರ-ಕಲೆ ಹುಟ್ಟಿದ ಎಷ್ಟೋ ಸಾವಿರ ವರ್ಷಗಳಮೇಲೆ, ಮನುಷ್ಯನ ಮನೋಧರ್ಮದ ಬೆಳವಣಿಗೆಗನುಗುಣವಾಗಿ ಹಾಡುಗಳ ರೂಪದಲ್ಲಿ ಸಾಹಿತ್ಯವು ತಲೆ ಹಾಕುತ್ತದೆ. ಅಂದಮೇಲೆ, ಸಾಹಿತ್ಯಕ್ಕಿಂತಲೂ ಚಿತ್ರಕಲೆಯೇ ಪ್ರಾಚೀನ

ವಾದುದು. ಚಿತ್ರಕಲೆ ಸಾಹಿತ್ಯಕ್ಕಿಂತ ಪ್ರಾಚೀನವಾದರೂ ಅದರ ಪ್ರಾಚೀನತೆ ಅದರ ಹೆಚ್ಚಿಗೆಗೆ ಸ್ವಲ್ಪಮಾತ್ರವೂ ಕಾರಣವಲ್ಲ. ಒಂದಕ್ಕಿಂತ ಒಂದು ಹೆಚ್ಚು ಎಂದು ಹೇಳುವುದಕ್ಕಾಗುವುದಿಲ್ಲ. ನಾನು ಸಾಹಿತ್ಯ-ಚಿತ್ರಕಲೆ ಎರಡಕ್ಕೂ ಒಂದೇ ಸ್ಥಾನವನ್ನು ಕೊಡುತ್ತೇನೆ. ಸಾಹಿತ್ಯವು ಒಂದು ವಿಧದಲ್ಲಿ ಹೆಚ್ಚಾದರೆ, ಚಿತ್ರಕಲೆ ಮತ್ತೊಂದು ವಿಧದಲ್ಲಿ ಹೆಚ್ಚಾಗಿರಬಹುದು.

ಸಾಹಿತ್ಯವೂ ಚಿತ್ರಕಲೆಯೂ ಹೇಗೆ ಒಂದೇ ಭಾವನೆಯ, ಒಂದೇ ಸತ್ಯಾಂಶದ, ಒಂದೇ ಸೌಂದರ್ಯಾತಿಶಯದ, ಒಂದೇ ದಿವ್ಯಭಾವದ ಎರಡು ಬೇರೆ ಬೇರೆ ರೂಪಗಳೆಂಬುದನ್ನು ಸ್ಥೂಲವಾಗಿ ತಿಳಿಸಿದುದಾಯಿತು. ಆದರೂ ಅವುಗಳ ಏಕತ್ವವನ್ನು ಸಮರ್ಥಿಸುವುದಕ್ಕೆ ಸ್ವಲ್ಪ ವಿಶಾಲವಾದ ವಿಮರ್ಶೆ ಬೇಕಾಗಿರುವುದು. ಭಿನ್ನ ಭಿನ್ನ ರೂಪದಲ್ಲಿ ಕಾಣಿಸಿಕೊಳ್ಳುವ ಸಾಹಿತ್ಯವನ್ನೂ ಭಟ್ಟಿ ಇಳಿಸಿ; ಚಿತ್ರಕಲೆಯನ್ನೂ ಭಟ್ಟಿ ಇಳಿಸಿ—ಎರಡರ ಸಾರವೂ ಒಂದೆ, ಎರಡರ ವಸ್ತುವೂ ಒಂದೆ. ಅಷ್ಟೇಕೆ-ಎರಡರ ಕಾರ್ಯವೂ ಒಂದೆ. ಒಂದನ್ನು ವಿವರವಾಗಿ ತಿಳಿಸಿದ ಹೊರತು ಎರಡರ ಏಕಭಾವವು ಚೆನ್ನಾಗಿ ವ್ಯಕ್ತವಾಗುವುದಿಲ್ಲ.

ಮೊದಲು, ಶ್ರೇಷ್ಠವಾದ ಸಾಹಿತ್ಯವೆಂದರೇನು—ವಿಚಾರಿಸೋಣ. ಸಾಹಿತ್ಯವೂ ಒಂದು ಕುಶಲಕಲೆಯಾದುದರಿಂದ ಕಲೆಯೆಂದರೇನೆಂಬುದನ್ನು ಒಂದೆರಡು ಮಾತಿನಲ್ಲಿ ತಿಳಿದುಕೊಳ್ಳುವುದು ಆವಶ್ಯಕ. ಕಲೆಗೂ ಶಾಸ್ತ್ರಕ್ಕೂ ಇರುವ ವ್ಯತ್ಯಾಸವನ್ನು ತಿಳಿದುಕೊಂಡರೆ ಕಲೆಯ ಸ್ವರೂಪವು ಚೆನ್ನಾಗಿ ಗೊತ್ತಾಗುತ್ತದೆ. ಯಾವ ವಸ್ತುವೇ ಆಗಲಿ, ಶಾಸ್ತ್ರವು ಕಂಡದ್ದನ್ನು ಕಂಡ ಹಾಗೆ ಅದರ ಗಾತ್ರ-ಪರಿಮಾಣ-ಸ್ವರೂಪಗಳನ್ನು ಕುರಿತು ಹೇಳುತ್ತದೆ. ಅಂದರೆ ಕಲೆ ಕಂಡದ್ದನ್ನು ಕಂಡಹಾಗೆ ಹೇಳುವುದಿಲ್ಲವೆಂದು ಅರ್ಥವಲ್ಲ. ಕಲೆ ಶಾಸ್ತ್ರವು ಮಾಡದ ಒಂದು ಹೆಚ್ಚಿನ ಕೆಲಸವನ್ನು ಮಾಡುತ್ತದೆ. ಯಾವುದಾದರೂ ಒಂದು ವಿಷಯವು (ಅಂದರೆ ಸುಂದರ ವಸ್ತುವಿನ ನೋಟ, ಸುಖದುಃಖಾದಿಗಳು ಇತ್ಯಾದಿ) ಮಾನವನ ಅಂತಃಕರಣದ ಮೇಲೆ ತನ್ನ ಪ್ರಭಾವದಿಂದ ಉಂಟುಮಾಡುವ ಪರಿಣಾಮವನ್ನು ಸೂಚಿಸುತ್ತದೆ. ಶಾಸ್ತ್ರವು ಅವಲೋಕಿಸುವ ವಸ್ತುಗಳು ಶವಗಳಂತೆ, ನಿರ್ಜೀವವಾದವು. ಆದರೆ ಕಲೆಯ ವಸ್ತುಗಳಲ್ಲಿ ಕಳೆಯಿದೆ, ಜೀವವಿದೆ. ಚಂದ್ರನ ಪರಿಮಾಣ, ಗಾತ್ರ, ರಚನೆ

ಇವುಗಳನ್ನು ತಿಳಿಯಬೇಕಾದರೆ ಖಗೋಳಶಾಸ್ತ್ರಜ್ಞನನ್ನು ಕೇಳಿ. ಚಂದ್ರನ ಪ್ರಭೆಯ ಪ್ರಭಾವವನ್ನು ಅರಿತುಕೊಳ್ಳಬೇಕಾದರೆ ಕಲಾನಿಪುಣನನ್ನು ಕೇಳಿ. ಆ ಕಲಾನಿಪುಣನು ಕವಿಯಾದರೂ ಆಗಬಹುದು, ಚಿತ್ರಗಾರನಾದರೂ ಆಗಬಹುದು; ಕವಿಯ ಕರ್ಮದ ಫಲ ಸಾಹಿತ್ಯ; ಚಿತ್ರಗಾರನ ಕರ್ಮದ ಫಲ ಚಿತ್ರಕಲೆ.

ಸಾಹಿತ್ಯದ ವಿಷಯದಲ್ಲಿ ಗ್ರೀಕರು ಏನು ಹೇಳುತ್ತಾರೆಂದು ಸ್ವಲ್ಪ ವಿಚಾರಿಸೋಣ.• ಕಾವ್ಯಪ್ರಪಂಚವು ಒಂದು imitation silk ಎನ್ನುತ್ತೇವಲ್ಲಾ ಹಾಗೆ ಒಂದು ಅನುಕರಣೆಯ ಪ್ರಪಂಚ; ಖೋಟಾ ಪ್ರಪಂಚ, ಸಾಚಾ ಅಲ್ಲ. ಅಲ್ಲಿ ಕಂಡುಬರುವ ವ್ಯಕ್ತಿಗಳು, ಭಾವೋದ್ರೇಕಗಳು ಮತ್ತು ಜೀವನಕ್ರಮವು ನಿಜವಾದ ಪ್ರಪಂಚದಲ್ಲಿ ಕಂಡುಬರುವವುಗಳಿಗಿಂತ ಉತ್ತಮವಾದರೂ ಆಗಬಹುದು, ಕೀಳಾದರೂ ಆಗಬಹುದು. ಕಾವ್ಯದ ಮುಖ್ಯ ಸಂಗತಿಗಳು ಹಿಂದೆ ನಡೆದ ಸಂಗತಿಗಳ ಅನುಕರಣೆಯಲ್ಲ; ಮುಂದೆ ನಡೆಯಬಹುದಾದವುಗಳನ್ನು ಅನುಕರಿಸುತ್ತವೆ. ಅಂದರೆ, ಕಾವ್ಯಪ್ರಪಂಚವು ಕವಿ ಬಗೆದ ಒಂದು ಆದರ್ಶಪ್ರಪಂಚದ ಅನುಕರಣೆ. ಈ ಅನುಕರಣೆಯ ಪ್ರಪಂಚದಿಂದ ನಮಗೆ ಉಪಯೋಗ ಬರಿಯ ಆನಂದ ಮಾತ್ರ. ಆನಂದಗೊಳಿಸುವುದು ಕಾವ್ಯದ ಮುಖ್ಯ ಗುರಿಯೆಂದು ಅರಿಸ್ಟಾಟಲನು ಒತ್ತಿ ಒತ್ತಿ ಹೇಳುವಂತೆ ಕಾಣುತ್ತದೆ. ಮತ್ತೆ ಕೆಲವು ಗ್ರೀಕ್ ಲೇಖಕರು ಕಾವ್ಯದ ಗುರಿ ಆನಂದವಾದರೂ ಆ ಕಾವ್ಯಪಠನವು ನಮ್ಮನ್ನು ಉತ್ತಮಗೊಳಿಸುವುದೆಂದು ಅಭಿಪ್ರಾಯಪಡುತ್ತಾರೆ.

ಮ್ಯಾಥ್ಯೂ ಆರ್ನಾಲ್ಡ್‌ನ ಮತಪ್ರಕಾರ—ಕಾವ್ಯವು (ಒಟ್ಟಿನಲ್ಲಿ ಬೇಕಾದರೆ ಸಾಹಿತ್ಯವೆಂದು ಇಟ್ಟುಕೊಳ್ಳೋಣ) "ಜೀವನದ ವಿಮರ್ಶೆ". ಒಬ್ಬರ ಮತದಂತೆ ಕಾವ್ಯ ಅನುಕರಣೆಯ ಪ್ರಪಂಚ; ಇನ್ನೊಬ್ಬರ ಮತದಂತೆ ಜೀವನದ ವಿಮರ್ಶೆ. ಯಾರ ಮತವನ್ನು ಸರಿಯೆನ್ನುವುದು; ಒಬ್ಬರು ಅತ್ತಕಡೆ ತುಯ್ಯುತ್ತಾರೆ; ಇನ್ನೊಬ್ಬರು ಇತ್ತಕಡೆ. ಇಬ್ಬರ ಮತವೂ ವಿರುದ್ಧವಾದುವೆ, ಅಥವಾ ಒಂದೇಯೋ? ಒಂದೇ ಎಂದು ಕಾಣುತ್ತದೆ. ಕೆಲವಂಶಗಳನ್ನು ಅರಿಸ್ಟಾಟಲನು ಒತ್ತಿ ಹೇಳುತ್ತಾನೆ. ಕೆಲವನ್ನು ಆರ್ನಾಲ್ಡನು ಒತ್ತಿ ಹೇಳುತ್ತಾನೆ. ಅರಿಸ್ಟಾಟಲನು ಕಾವ್ಯದ ಗುರಿ ಆನಂದವೆಂದು ಹೇಳಿದರೂ, ಕಾವ್ಯವು

ಜೀವನದ ವಿಮರ್ಶೆ ಆಗಿರಕೂಡದೆಂದು ಎಲ್ಲೂ ಹೇಳಿಲ್ಲ. ಅವರಿಗೆ, ಅವರ ಕಾಲದವರಿಗೆ, ಕಾವ್ಯದಿಂದ ಜೀವನದ ವಿಮರ್ಶೆ ನಡೆಯಬೇಕಾದ ಆವಶ್ಯಕತೆಯಿರಲಿಲ್ಲ; ಆ ಕೆಲಸವನ್ನು ನೀತಿಶಾಸ್ತ್ರ ಮತ್ತು ತತ್ವಶಾಸ್ತ್ರಗಳು ನಡಸುತ್ತಿದ್ದುವು. ಆದರೆ ಆರ್ನಾಲ್ಡನ ಕಾಲಸ್ಥಿತಿ ಹಾಗಿರಲಿಲ್ಲ. ಅವನು, ಕಾವ್ಯದ ವಿಚಾರವನ್ನು ಚರ್ಚಿಸುತ್ತ,—

"Our relegion, parading evidences such as those on which the popular mind relies now; our philosophy, pluming itself on its reasonings about causation and finite and infinite being: What are they but shadows and dreams and false show of knowledge? The day will come when we shall wonder at ourselves for having trusted to them, for having taken them seriously; and the more we perceive their hollowness, the more we shall prize the 'breath and finer spirit of knowledge offered to us by poetry'...... 'More and more mankind will discover that we have to turn to poetry to interpret life for us, to console us, so sustain us.' "—ಎಂದು ಹೇಳುತ್ತಾನೆ.

ಆದುದರಿಂದ ಆರ್ನಾಲ್ಡನಿಗೆ, ಅವನ ಕಾಲದವರಿಗೆ, ಕಾವ್ಯದಿಂದ ಜೀವನದ ವಿಮರ್ಶೆ ನಡೆಯಬೇಕಾದುದು ಆವಶ್ಯಕವಾಯಿತು. (ಅವನು ಕಾವ್ಯದ ವಿಚಾರವಾಗಿ ಹೇಳಿದ ಮಾತನ್ನು ಒಟ್ಟು ಸಾಹಿತ್ಯಪ್ರಪಂಚಕ್ಕೆ ಅನ್ವಯಿಸಿಕೊಳ್ಳುವುದರಲ್ಲಿ ಬಾಧಕವೇನೂ ಇಲ್ಲ). ಇವರಿಬ್ಬರ ಮಾತನ್ನೂ ಸೇರಿಸಿ ನಾವು ಹೀಗೆ ಹೇಳಬಹುದು: ಸಾಧಾರಣವಾಗಿ ಉತ್ತಮ ಸಾಹಿತ್ಯವು "ಜೀವನದ ವಿಮರ್ಶೆ" (ಅಂದರೆ ನೀತಿವ್ಯಂಜಕ) ಯಾಗಿಯೂ ಇರಬೇಕು, ಆನಂದದಾಯಕವಾಗಿಯೂ ಇರಬೇಕು. ಆನಂದವೊಂದೇ ಸಾಹಿತ್ಯ ಗುರಿಯಾದರೆ ಸಾಹಿತ್ಯವಿಲ್ಲದೆ ನಾವು ಅನೇಕ ವಿಧದಲ್ಲಿ ಆನಂದ ಹೊಂದಬಹುದು;

ಜೀವನದ ವಿಮರ್ಶೆಯೊಂದೇ ಸಾಹಿತ್ಯದ ಗುರಿಯಾದರೆ, ನಮಗೆ ಸಾಹಿತ್ಯ ಬೇಕಿಲ್ಲ. ಸಾಹಿತ್ಯವು "ಪುರಾಣದ ಬದನೆಕಾಯಿ"ಯಾಗುವುದು. ಇವೆರಡೂ ಸ್ವಲ್ಪ ಹೆಚ್ಚು ಕಡಮೆಯಾಗಿ ಸಾಹಿತ್ಯದಲ್ಲಿರಬಹುದು.

ನಮ್ಮ ಪೂರ್ವಿಕರು ಸಾಹಿತ್ಯವನ್ನು "ಕಾಂತಾಸಂಮಿತ"ವೆಂದು ಹೇಳಿರುವುದರಲ್ಲೂ ಇದೇ ಅಭಿಪ್ರಾಯ ತೋರುತ್ತದೆ.

ಒಂದು ಕಾವ್ಯವು ಪೂರ್ಣ ಜೀವನ ವಿಮರ್ಶೆಯಾದ ಮಾತ್ರಕ್ಕೆ ಆ ಕಾವ್ಯದಲ್ಲಿ ಉಪದೇಶವಲ್ಲದೆ ಮತ್ತೇನೂ ಇಲ್ಲವೆಂದು ಹೇಳುವುದಕ್ಕಾಗುವುದಿಲ್ಲ. ಉದಾಹರಣೆಗಾಗಿ Thomas Hoodನ 'Bridge of sighs' ಎಂಬ ಕವನವನ್ನು ತೆಗೆದುಕೊಳ್ಳೋಣ. ಅದು ಪೂರ್ಣ ಜೀವನದ ವಿಮರ್ಶೆ. ಒಟ್ಟು ಸಮಾಜಕ್ಕೇ ಮುಟ್ಟಿದರೆ ತಡವರಿಸಿಕೊಳ್ಳುವಂಥ ಬರೆ ಎಳೆದಿದ್ದಾನೆ! ಆದರೂ ಎಂಥ ಉತ್ಕೃಷ್ಟ ಕಾವ್ಯವದು! ಮೂಲಕ್ಕೆ ಸರಿಸಮನಾದ, ಒಂದು ವಿಧದಲ್ಲಿ ಮೂಲವನ್ನು ಮೀರಿಸುವ ಶ್ರೀ ಬಿ. ಎಂ. ಶ್ರೀಕಂಠಯ್ಯನವರ ಭಾಷಾಂತರವನ್ನು ಓದುತ್ತೇನೆ, ದಯೆಯಿಟ್ಟು ಲಾಲಿಸಬೇಕು...... [ದುಃಖಸೇತು : ಅನಾಥೆ ಇವಳಿನ್ನೊಬ್ಬಳು......] ...... ಈ ಕವನವು ಹುಳುಕಿನಿಂದ ತುಂಬಿರುವ ಒಂದು ಸಮಾಜದ ಪ್ರತಿಬಿಂಬ, ಆ ಹುಳುಕನ್ನು ಬೆಳಕಿಗೆ ತರುವ ಮೂಲಕ "ಜೀವನದ ವಿಮರ್ಶೆ", ಪ್ರಪಂಚವು ಹೇಗಿರಬೇಕೆಂದು ತನ್ನ ಮನಸ್ಸಿನಲ್ಲಿ ಒಂದು ಆದರ್ಶ ಪ್ರಪಂಚವನ್ನು ಕಲ್ಪಿಸಿಕೊಂಡು ಅದನ್ನು ಇತರರಿಗೆ ತೋರಿಸಬೇಕೆಂದಿರುವುದರಿಂದ ಅರಿಸ್ಟಾಟಲ್ ಮತದಂತೆ ಒಂದು ಅನುಕರಣೆ, ಎಲ್ಲಕ್ಕಿಂತಲೂ ಮೇಲಾಗಿ, ಅದು ಕವಿಯ ಪ್ರಪಂಚ!

* * *

ಒಂದು ಕಾವ್ಯವು ಆನಂದದಾಯಕವೋ ಅಥವಾ ಜೀವನದ ವಿಮರ್ಶೆಯೋ–ಎಂತಾದರೂ ಇರಲಿ. ಆದರೆ, ಕಾವ್ಯಪ್ರಪಂಚವು ಬರಿಯ ಅನುಕರಣೆಯೆ? ಅದು ಕವಿಯ ಸ್ವತಂತ್ರ ಕಲ್ಪನಾಶಕ್ತಿಯ ನಿರ್ಮಾಣವಲ್ಲವೆ? ಕವಿಯ ಪ್ರಪಂಚವಲ್ಲವೆ?—ಎಂಬ ಪ್ರಶ್ನೆಗಳು ಮೂಡುವುವು. ಕಾವ್ಯವು ಅನುಕರಣೆಯಲ್ಲವೆಂದು ಹೇಳುವುದಕ್ಕಾಗುವುದಿಲ್ಲ, ಸ್ವಲ್ಪಮಟ್ಟಿಗೆ ಅನುಕರಣೆ. ಕಾವ್ಯವು ಕವಿಯ ಕೃತಿ. ಆದರೆ ಕಾವ್ಯವಸ್ತುವು ಕವಿಯದಲ್ಲ. ಬಾಹ್ಯ ಪ್ರಪಂಚದ ವಸ್ತುವನ್ನು ತೆಗೆದುಕೊಂಡು, ಅಂದವಾದ ಭಾಷೆಯಲ್ಲಿ, ಭಾವ

ಪೂರಿತವಾದ ಭಾಷೆಯಲ್ಲಿ ಕಾವ್ಯವನ್ನು ನೇಯುತ್ತಾನೆ. ಆ ನೇಯ್ಗೆಯ ಕೆಲಸವು ಸಂಪೂರ್ಣವಾಗಿ ಅಪೂರ್ವದು. ಕಾವ್ಯವು ಬಾಹ್ಯಪ್ರಪಂಚದ ಅನುಕರಣೆ ಯಾದಮಾತ್ರಕ್ಕೆ ಕವಿಯ ಕೀರ್ತಿಗೆ ಕುಂದಿಲ್ಲ. ನಿಜವಾದ ಪ್ರಪಂಚದ ವಸ್ತು ಗಳು ಕಾವ್ಯೋತ್ಪತ್ತಿಗೆ ಬೇಕೇಬೇಕು. ಷೆಲ್ಲಿಯ ಮಾಯಾಪ್ರಪಂಚದಲ್ಲಿ ಕೂಡ ನೈಜಪ್ರಪಂಚದ ಅನುಕರಣೆಯ ಕುರುಹುಗಳು ಕಾಣುವುವು. ಕಾವ್ಯವು ಹಿಂದೆ ಈ ಪ್ರಪಂಚದಲ್ಲಿ ಇಲ್ಲದ್ದು, ಆದ್ದರಿಂದ ಒಂದು ನೂತನ ಸೃಷ್ಟಿ ; ಆದರೂ ಹಿಂದೆ ಹೇಳಿದಂತೆ, ಅನುಕರಣೆ. ಅನುಕರಣೆ ಎಲ್ಲ ಕಲೆಯಲ್ಲೂ ಆವಶ್ಯಕ, ಅಗತ್ಯ. ಅನುಕರಣೆಯಿಂದಲೇ ಪ್ರಪಂಚಜ್ಞಾನವು ಸಾಧ್ಯ — ನಿಜವಾದ ಪ್ರಪಂಚವನ್ನು, ಅದರ ಗೂಢತ್ವವನ್ನು, ಅದರ ರಹಸ್ಯವನ್ನು, ಎಷ್ಟೆಷ್ಟರ ಮಟ್ಟಿಗೆ ವಿವರಿಸುತ್ತದೆಯೋ ಅಷ್ಟಷ್ಟರಮಟ್ಟಿಗೆ ಅನುಕರಣೆಯ ಮಾರ್ಗ ಸಫಲ. ಅಂದರೆ ಅವುಗಳ ಅನ್ವೇಷಣದಲ್ಲಿ ಅನುಕರಣೆಗಳು ಪ್ರಯೋಗ ಗಳಂತೆ (experiments).

ಮೇಲೆ ಹೇಳಿದ ಅಭಿಪ್ರಾಯಗಳು – ಸಾಹಿತ್ಯದಲ್ಲಿ ಉಲ್ಲಾಸಜನಕವಾದ ವಸ್ತುವಿದೆ, ಜೀವನದ ವಿಮರ್ಶೆಯಿದೆ, ಆ ಮೂಲಕ ಮಾನವನನ್ನು ಉತ್ತಮ ಗೊಳಿಸುವ ಶಕ್ತಿಯಿದೆ ; ಸಾಹಿತ್ಯವು ನಮ್ಮ ಉಪಾಧ್ಯಾಯನಲ್ಲದಿದ್ದರೂ ನಮ್ಮ ಹಿತಚಿಂತಕ, ನಮ್ಮ ಹಿತವನ್ನೇ ಬಯಸುವ ಕಾಂತೆಯೆಂದರೂ ಸರಿಯೆ —ಎಂದು ತಿಳಿಸುತ್ತವೆ. ಇಷ್ಟುಮಾತ್ರ ತಿಳಿದುಕೊಂಡರೆ ಉತ್ತಮ ಸಾಹಿತ್ಯದ ಪರಿಪೂರ್ಣತೆ ಗೊತ್ತಾಗುವುದಿಲ್ಲ. ಆದುದರಿಂದ ಸಾಹಿತ್ಯ ಪ್ರಪಂಚವನ್ನು ಇನ್ನೂ ಸ್ವಲ್ಪ ಒಳಹೊಕ್ಕು ನೋಡಬೇಕು.

ಮೇಲೆ ಹೇಳಿದಂತೆ ಸಾಹಿತ್ಯವು ಉಲ್ಲಾಸಕರವೂ ಹೌದು, ಜೀವನದ ವಿಮರ್ಶೆಯೂ ಹೌದು. ಅಲ್ಲದೆ, ಈ ಪ್ರಪಂಚದ ಆಧಾರದಮೇಲೆ ರಚಿತ ವಾದ, ಈ ಪ್ರಪಂಚದಿಂದ ಬೇರೆಯಾದ ಒಂದು ನೂತನ ಪ್ರಪಂಚ. ಈ ನೂತನ ಪ್ರಪಂಚದ ಕರ್ತೃವೇ ಕವಿ. ಕವಿ ಸಾಧಾರಣವಾಗಿ ಎಲ್ಲರಿಗೂ ಕಾಣದಿರುವ, ಪ್ರಪಂಚದ ಭಿನ್ನಭಿನ್ನ ರೂಪಾಂತರದ ತೆರೆಯಲ್ಲಿ ಹುದುಗಿ ಕೊಂಡಿರುವ ಸತ್ಯವನ್ನು, ಅಸದೃಶವಾದ ಆ ಸೌಂದರ್ಯಾತಿಶಯವನ್ನು, ಸರ್ವಾಂತರ್ಗತವಾದ ಆ ಶಕ್ತಿವಿಶೇಷವನ್ನು ತನ್ನ ಕಾವ್ಯದ ಮೂಲಕ ವ್ಯಕ್ತ ಪಡಿಸುತ್ತಾನೆ. ಇಂತು ಕವಿ ಒಬ್ಬ ಜ್ಞಾನಯೋಗಿ. ಆ ಕವಿಯ ಕಾವ್ಯ

ವನ್ನು ನಾವು ಓದಿದಾಗ ನಮ್ಮ ಕಣ್ಣೆದುರಿಗಿರುವ ತೆರೆ ಮಾಯವಾಗುತ್ತದೆ. ಕವಿ ನಮ್ಮ ಕೈಹಿಡಿದುಕೊಂಡು ತನ್ನ ಕಾವ್ಯಪ್ರಪಂಚಕ್ಕೆ ನಮ್ಮನ್ನು ಒಯ್ದು ತಾನು ಕಂಡಿರುವ ಸೌಂದರ್ಯವನ್ನು ನಮಗೂ ತೋರಿಸುತ್ತಾನೆ. ಇಂತು ಕವಿ ನಮ್ಮ ಗುರು. ಕವಿಯ ಕರ್ಮವಾದ ಕಾವ್ಯಗಳ ಸಮುದಾಯವೇ ಸಾಹಿತ್ಯ. ಹೀಗೆ ಸಾಹಿತ್ಯವು ನಾವು ಕಾಣಲಾಗದ, ಅಥವಾ ಕಾಣುವುದಕ್ಕೆ ಲಕ್ಷ್ಯಗೊಡದಿರುವ ಜಗತ್ತನ್ನು ನಮಗೆ ತೋರಿಸುವ ಬೆಳಕು. ಒಟ್ಟಿನಲ್ಲಿ ಹೇಳುವುದಾದರೆ, ಸಾಹಿತ್ಯವು ಒಂದು ಸಾಕ್ಷಾತ್ಕಾರ. ಪ್ರಪಂಚವು ಯಾವ ಶಕ್ತಿವಿಶೇಷದಿಂದ ನಿಂತಿದೆಯೋ, ಪ್ರಪಂಚದ ಜೀವರಾಶಿ ಯಾವ ಶಕ್ತಿವಿಶೇಷದಿಂದ ತೇಜಸ್ಸಿನಿಂದ ಕೂಡಿದೆಯೋ, ಪ್ರಪಂಚದ ಸೌಂದರ್ಯಕ್ಕೆ ಯಾವ ಶಕ್ತಿವಿಶೇಷವು ಆಧಾರಭೂತವಾಗಿದೆಯೋ, ಕೈಗೆ ಸಿಕ್ಕದ, ಕಣ್ಣಿಗೆ ಕಾಣದ, ಮಾತಿಗೆ ಮೀರಿದ ಆ ಚೈತನ್ಯಸ್ವರೂಪದ ಸಾಕ್ಷಾತ್ಕಾರವೇ ಸಾಹಿತ್ಯವು. ಆ ಸಾಕ್ಷಾತ್ಕಾರವು ನಮಗೆ ಎಲ್ಲವನ್ನೂ ಸಾಕ್ಷಾತ್ಕರಿಸಿ, ಅಂದರೆ ಒಡೆದು ತೋರಿಸುತ್ತದೆ. ಕಾರ್ಲೈಲ್ ರವರು ಇದೇ ಅಭಿಪ್ರಾಯವನ್ನು ಬೇರೆ ಬೇರೆ ಮಾತುಗಳಿಂದ ಹೇಳಿರುತ್ತಾರೆ; ಗಂಭೀರ ಗಾನಪೂರಿತವಾದ ಅವರ ನುಡಿಗಳನ್ನು ಭಾಷಾಂತರಿಸಿ ಕೆಡಿಸಿ ಹಾಳುಮಾಡುವುದಕ್ಕಿಂತಲೂ ಹಾಗೆಯೇ ಅನುವಾದಿಸುತ್ತೇನೆ. ಏನೆಂದರೆ—

"Literature, so far as it is Literature, is an 'apocalypse of nature', a revealing of the 'open secret' It may well enough be named........'a continuous revelation' of the Godlike in the Terrestrial and the Common. The Godlike does ever, in every truth, endure there', is brought out, now in this dialect, now in that with various degrees of clearness. All true gifted singers and speakers are, consciously or unconsciously doing so. The dark stormful indignation of a Byron may have touches of it ;....How much more the

sphere-harmony of Shakespeare, of a Goethe—(of a Tagore ಎಂದು ನಾವು ಸೇರಿಸಬಹುದು) ; the cathedral music of a Milton! They are something too, those humble genuine lark notes of Burns ;—skylark, starting from its humble furrow, far overhead into the blue depths and singing to us there so genuinely! For all singing is of the nature of worship ; so whereof such singing is but a record, and fit melodious representation." —ನಾನು ಹಿಂದೆ ವಿವರಿಸಿರುವುದೂ ಇದೇ ಅಭಿಪ್ರಾಯ. 'The open secret' ಎಂದರೆ 'ಕಾಣುವ ಗುಟ್ಟಿ'ನ ಸಾಕ್ಷಾತ್ಕಾರವೆ ಸಾಹಿತ್ಯ. ದಿವ್ಯ ದರ್ಶನವು ಕಾಣಬೇಕೆಂದು ಪ್ರಯತ್ನಪಟ್ಟವರಿಗೆ, ಕಾಣಲು ಶಕ್ತಿಯುಳ್ಳವರಿಗೆ ಲಭಿಸುತ್ತದೆ. ಆದರೆ ನಮ್ಮ ಭಾಗಕ್ಕೆ ಅದು ರಹಸ್ಯ. ಆ ಗುಟ್ಟನ್ನು ಒಡೆದು ನಮಗದನ್ನು ಇನಿದನಿಯಿಂದ ಹಾಡಿ ತೋರುವವನೇ ಕವಿ.

ಅಂದರೆ ಕಾವ್ಯಗಳೆಲ್ಲಾ ದೈವತ್ವದ, ಆ ಒಳಗುಟ್ಟಿನ, ಸಾಕ್ಷಾತ್ಕಾರ ವಾಗಿರಬೇಕೆ ? ಹಾಗೆ ಸಾಕ್ಷಾತ್ಕಾರವಲ್ಲದೆ ಹೋದರೆ ಆ ಕಾವ್ಯಗಳು ಉತ್ತಮ ಸಾಹಿತ್ಯದಲ್ಲಿ ಗಣ್ಯವಾಗುವುದಿಲ್ಲವೇ–ಎಂದು ಕೇಳಬಹುದು. ಒಂದು ಕಾವ್ಯ ದಲ್ಲಿ ಪೂರ್ಣ ಸಾಕ್ಷಾತ್ಕಾರವಿಲ್ಲದೇ ಹೋದರೂ ಸಾಕ್ಷಾತ್ಕಾರದ ಪ್ರಯತ್ನ ವಿರಬಹುದು. ಆ ಪೂರ್ಣ ಸಾಕ್ಷಾತ್ಕಾರವನ್ನು ಷೆಲ್ಲಿ ಕವಿಯ 'To a Skylark' ಎಂಬ ಕವನದಲ್ಲಿ ಕಾಣಬಹುದು. ಸಾಹಿತ್ಯವು ಅನೇಕ ಬಗೆಗಳಲ್ಲಿ ಆ ಸಾಕ್ಷಾತ್ಕಾರವನ್ನು ವ್ಯಕ್ತಪಡಿಸುತ್ತದೆ. ವಾಚಕರ ಶಕ್ತಿ ಹೆಚ್ಚುಹೆಚ್ಚಾದಂತೆ ಆ ಸಾಕ್ಷಾತ್ಕಾರವು ಹೆಚ್ಚು ಹೆಚ್ಚು ಬೆಳಕಿನಿಂದ ಹೆಚ್ಚು ಹೆಚ್ಚು ಅದ್ಭುತವಾಗಿ ಗೋಚರಿಸುತ್ತದೆ. ಕವಿ ತಾನು ಕಂಡಿರುವುದಕ್ಕೆ ತನ್ನ ಬೆಳಕನ್ನು ಬೀರಿ ನಮಗೆ ತೋರಿಸುತ್ತಾನೆ. ಅವನ ಬೆಳಕು ಹೆಚ್ಚಾಗಿದ್ದಷ್ಟೂ, ನಮ್ಮ ದೃಷ್ಟಿ ಪಾಟವವೂ ಹೆಚ್ಚಾಗಿದ್ದಷ್ಟೂ, ಸಾಕ್ಷಾತ್ಕಾರವು ಪೂರ್ಣತೆಯಿಂದ ಕಂಗೊಳಿಸು ತ್ತದೆ. ಬಗೆ–ಕುರುಡನಿಗೆ ಯಾವುದೂ ಕಾಣುವುದಿಲ್ಲ.

ಹೀಗೆ ಒಳ್ಳೆಯ ಸಾಹಿತ್ಯವು ಬರಿಯ ಜೀವನದ ವಿಮರ್ಶೆಯೂ ಅಲ್ಲ ;

ಅದು ಒಂದು ಸಾಕ್ಷಾತ್ಕಾರ. ಆ ಸಾಕ್ಷಾತ್ಕಾರದ ಮೂಲಕ ಜೀವನದ ವಿಮರ್ಶೆ, ಜೀವನದ ಶೋಧನೆ ಆಗುತ್ತದೆಂದು ಹೇಳಬಹುದು. ಹಾಗಾದರೆ ಉತ್ತಮ ಕಾವ್ಯವು ಆಮೂಲಾಗ್ರವಾಗಿ ಒಂದು ಸಾಕ್ಷಾತ್ಕಾರವಾಗಿರಬೇಕೆ ? ಅದು ಅಸಾಧ್ಯವೆಂದು ತೋರುತ್ತದೆ. ಉತ್ತಮ ಸಾಹಿತ್ಯದಲ್ಲಿ ಸಂಪೂರ್ಣ ಸಾಕ್ಷಾತ್ಕಾರಕ್ಕೆ ಮಾರ್ಗಗಳಾದ ಸಾಕ್ಷಾತ್ಕರಣಗಳು (revelations) ಇದ್ದರೆ ಸಾಕು.

ಸಾಹಿತ್ಯದಲ್ಲಿ ಸಾಕ್ಷಾತ್ಕರಣಗಳು ಎಂದರೇನು, ಸ್ವಲ್ಪ ವಿಚಾರಿಸೋಣ. ಈ ವಿಷಯವಾಗಿ ಹೆಚ್ಚು ತಿಳಿದುಕೊಳ್ಳಬೇಕೆನ್ನುವವರು Gilbert Murray ಯವರ ಅಮೋಘವಾದ Literature as Revelation ಎಂಬ ಲೇಖನವನ್ನು ನೋಡಬಹುದು ; ಇಲ್ಲಿ ಸೂಚನೆ ಮಾತ್ರ ಸಾಧ್ಯ.

ಈ ಸಾಕ್ಷಾತ್ಕರಣವು ಕವಿಯ ಕಾವ್ಯದಲ್ಲೆಲ್ಲಾ ಅಲ್ಲಲ್ಲಿ ಮಿರುಗುತ್ತಿರಬಹುದು. ಆದರೆ ಅದು ನಮ್ಮ ಒಂದೆರಡು ಮಾತಿನ ಹಿಡಿತಕ್ಕೆ ಸಿಕ್ಕುವುದು ಕಷ್ಟ. ಕಾವ್ಯವನ್ನು ಏಕಾಗ್ರಚಿತ್ತದಿಂದ, ಜೀವನದ ವಿಷಯವಾಗಿ, ಈ ಪ್ರಪಂಚದ ವಿಷಯವಾಗಿ ಹೊಸ ಹೊಸ ಭಾವಗಳನ್ನು ತಿಳಿದುಕೊಳ್ಳಬೇಕೆಂಬ ಉದ್ದೇಶದಿಂದ, ಓದಿದವರಿಗೆ ಮಾತ್ರ ಕಾವ್ಯದ ಸಂಪೂರ್ಣ ಸಾಕ್ಷಾತ್ಕರಣವು ದೊರೆಯುತ್ತದೆ. ಇದು ಸಾಮಾನ್ಯ ವಾಚಕರಿಗೆ ಸಾಧ್ಯವಲ್ಲ. ಆದರೂ, ಈ ಸಾಕ್ಷಾತ್ಕರಣವು ಕಾವ್ಯವನ್ನೆಲ್ಲಾ ಆವರಿಸಿಕೊಂಡಿರಬೇಕಾಗಿಲ್ಲ. ಅದು ಕಾವ್ಯದ ಒಂದೆರಡು ವಾಕ್ಯಗಳಲ್ಲಿ ಅಡಕವಾಗಿರಬಹುದು. ಸೌಲಭ್ಯಕ್ಕಾಗಿ ವಾಕ್ಯಗಳ ಉದಾಹರಣೆ ಕೊಡುತ್ತೇನೆ, ಅಷ್ಟೆ. ಸಾಕ್ಷಾತ್ಕರಣವು, ಅಂದರೆ, ಕವಿಯ ಸಂದೇಶವು, ಒಂದೆರಡು ವಾಕ್ಯಗಳಲ್ಲಿ ಸಿಗುವುದಿಲ್ಲ. ಒಟ್ಟು ಕಾವ್ಯವೇ ಒಂದು ಸಾಕ್ಷಾತ್ಕರಣ, ಒಂದು ಸಂದೇಶ. ಆದರೆ ಕೆಲವು ವೇಳೆ ಸಂದೇಶದ ಸಾರಾಂಶವು ಒಂದೆರಡು ವಾಕ್ಯಗಳಲ್ಲಿ ಅಡಕವಾಗಿರಬಹುದು.

ಇಂಥ ಸಾಕ್ಷಾತ್ಕರಣಕ್ಕೆ ಒಂದೆರಡು ಉದಾಹರಣೆಗಳನ್ನು ಕೊಡಬಹುದು. ಮಿಲ್ಟನ್ ಮಹಾ ಕವಿ ಮುದ್ರಣ ಸ್ವಾತಂತ್ರ್ಯದ ವಿಷಯವಾಗಿ ಬರೆಯುತ್ತ—"A good book is the precious life-blood of a master-spirit, treasured up for a

life beyond life"* ಎಂದು ಹೇಳಿದ್ದಾನೆ. ಎಷ್ಟು ಸತ್ಯವಾದ ಮಾತು! ನೀವು ಪ್ರತಿಯೊಂದು ಉತ್ತಮ ಕಾವ್ಯವನ್ನೋದುವಾಗಲೆಲ್ಲಾ ಆ ಜ್ಯೋತಿರ್ವಾಕ್ಯವು ನೆನಪಿಗೆ ಬಂದು ನೀವು ಓದುತ್ತಿರುವ ಕಾವ್ಯದ ಮೇಲೆಲ್ಲಾ ಒಂದು ಹೊಸ ಪ್ರಭೆಯನ್ನು ಹೇಗೆ ಹರಡುತ್ತದೆ! ರಾಮಾಯಣ, ಮಹಾ ಭಾರತ, ಮುಂತಾದ ಪ್ರಾಚೀನ ಗ್ರಂಥಗಳು ಈ ದೃಷ್ಟಿಯಿಂದ ಎಂದಿಗೂ ಅಳಿಯದ ಮಹಾಕಾವ್ಯಗಳೆಂದು ತೋರುತ್ತದೆ. ಟ್ಯಾಗೂರ್ ಕವಿಯವರ 'ಗೀತಾಂಜಲಿ'ಯನ್ನು ಓದಿ. ಮಿಲ್ಟನ್ ಕವಿಯ ವಾಕ್ಯವು ಸ್ಪಷ್ಟವಾಗಿ ಗೊತ್ತಾಗುತ್ತದೆ; ಗೀತಾಂಜಲಿಯ ಬೆಲೆ ಗೊತ್ತಾಗುತ್ತದೆ.

ಮಿಲ್ಟನ್ ಕವಿಯಿಂದ ಇನ್ನೊಂದು ಉದಾಹರಣೆಯನ್ನು ಕೊಡುತ್ತೇನೆ: "Who best bear his mild yoke, they serve him best They also serve who only stand and wait." ದೇವದೇವನ ಸೇವೆಯನ್ನು ಕಾರ್ಯರೂಪವಾಗಿ ಮಾಡಲು ನಿಜವಾಗಿಯೂ ಚೈತನ್ಯವಿಲ್ಲದವರಿಗೆ ಎಂಥ ಸಂಜೀವನ ವಾಕ್ಯವಿದು!

ಹೀಗೆ, ವಿಶಾಲವಾದ ಪ್ರಪಂಚದ ಅನುಭವವನ್ನು ಒಳಕೊಂಡಿರುವುದೇ ಸಾಕ್ಷಾತ್ಕರಣ; ಸಾಕ್ಷಾತ್ಕರಣವನ್ನು ಹೆಚ್ಚು ಹೆಚ್ಚಾಗಿ ಉಳ್ಳದ್ದೇ ಉತ್ಕೃಷ್ಟ ಸಾಹಿತ್ಯ.

ಈ ಸಾಕ್ಷಾತ್ಕರಣಗಳೆಲ್ಲವೂ ಸತ್ಯವಾಕ್ಯಗಳೆಂದು ನಂಬುವುದಕ್ಕಾಗು ವುದಿಲ್ಲ. ಅವು ಅರ್ತಧ್ವನಿಗಳು, ಹುರುಪು ಹುಟ್ಟಿಸುವ ಕೂಗುಗಳು; ಕೊರಗನ್ನು ಕುಗ್ಗಿಸಿ ಹೃದಯವನ್ನು ಹಿಗ್ಗಿಸುವ ಸುಧಾಬಿಂದುಗಳು; ಕಗ್ಗತ್ತಲೆ ಯಲ್ಲಿ ನಡೆಯುತ್ತಿರುವವನಿಗೆ ಎಲ್ಲೋ ದೂರದಲ್ಲಿ ಬಾನಿನಲ್ಲಿ ಮಿನುಗುತ್ತ ಸ್ವಲ್ಪ ಬೆಳಕನ್ನು ಬೀರುವ ಕಿರುತಾರಕೆಗಳಂತೆ, ನಡೆಯುವ ದಾರಿಯನ್ನು ಮುಸಕು ಮುಸಕಾಗಿ ತೋರಿಸುತ್ತವೆ. ಆ ಸ್ವಲ್ಪ ಬೆಳಕನ್ನು ನಂಬಿಕೊಂಡು ನಡೆದರೆ ನಾವು ಹುಡುಕುತ್ತಿರುವ ಗುರಿ ಸಿಕ್ಕಿದರೂ ಸಿಕ್ಕಬಹುದು. ಅಥವಾ–ಈ ಸಾಕ್ಷಾತ್ಕರಣಗಳು–ಕಾಣದ ಅಡವಿಯಲ್ಲಿ ಹೆಜ್ಜೆಗುರುತುಗಳು.

---

* "ಒಂದು ಉತ್ತಮ ಗ್ರಂಥವು ಮಹಾ ಚೇತನೊಬ್ಬನ ಅನರ್ಘ್ಯವಾದ ಜೀವ ಸಾರ; ಜೀವಿತದ ಮುಂದಿನ ಜೀವಿತಕ್ಕಾಗಿ ಶೇಖರಿಸಿದ ಜೀವಸಾರ."

ಅವನ್ನು ಹಿಡಿದುಕೊಂಡು ನಡೆದರೆ ನಮ್ಮ ಜೀವನದ ಮುಖ್ಯೋದ್ದೇಶವು ಲಭಿಸಿದರೂ ಲಭಿಸಬಹುದು. ಏಕೆಂದರೆ, ಅವು ತಿರುಗಿ ತಿರುಗಿ ಪಳಗಿದ ಪ್ರಯಾಣಿಕನ ಹೆಜ್ಜೆಗುರುತುಗಳು. ನಾವು ಏನನ್ನು ಹುಡುಕಿಕೊಂಡು ಜೀವನ ಪಥದಲ್ಲಿ ನಡೆಯುತ್ತಿದ್ದೇವೆಯೋ ಅವನೂ ಅದನ್ನೇ ಹುಡುಕಿಕೊಂಡು ಪ್ರಯಾಣ ಮಾಡುತ್ತಿದ್ದಾನೆ. ಅವನೂ ದಾರಿ ತಪ್ಪಿದವನೇ, ಇನ್ನೂ ತಪ್ಪು ತ್ತಿರಬಹುದು. ಆದರೂ ಅವನು ಕೊನೆಯ ಗುರಿಯನ್ನು ಮುಟ್ಟುವುದರಲ್ಲಿ ಬದ್ಧಕಂಕಣನು. ಅವನನ್ನು ಹಿಂಬಾಲಿಸಿದರೆ ಒಳ್ಳೆಯದು.

ಸಾಹಿತ್ಯವು ಏನೆನ್ನುವುದನ್ನು ಸ್ವಲ್ಪ ತಿಳಿದುದಾಯಿತು. ಇನ್ನು ಸಾಹಿತ್ಯದಿಂದ ಉಪಯೋಗವೇನು, ಅದರ ಕಾರ್ಯವೇನೆನ್ನುವುದನ್ನು ಒಂದೆರಡು ಮಾತಿನಲ್ಲಿ ಹೇಳುತ್ತೇನೆ.

ಸಾಹಿತ್ಯವನ್ನು ಏತಕ್ಕೆ ಓದುತ್ತೇವೆ? ಎಂಬ ಪ್ರಶ್ನೆಯನ್ನು ನಮಗೆ ನಾವೇ ಹಾಕಿಕೊಳ್ಳೋಣ. ಆ ಪ್ರಶ್ನೆಗೆ ದೊರೆಯುವ ಉತ್ತರವೇ ಸಾಹಿತ್ಯದ ಉಪಯೋಗವನ್ನು ಸ್ಪಷ್ಟಪಡಿಸುವುದು.

ನಾವು ಎಲ್ಲ ಗ್ರಂಥಗಳನ್ನೂ ಒಂದು ಗಳಿಗೆಯ ಸಂತೋಷಕ್ಕಾಗಿ ಅಲ್ಲ ಓದುವುದು. ಕೆಲವು ಗ್ರಂಥಗಳನ್ನು ಬಾರಿಬಾರಿಗೂ ಬೇಸರವಿಲ್ಲದೆ ಓದು ತ್ತೇವೆ. ಕಾರಣವೇನು? ಮಾನವನು ನಿರಂತರವೂ ಕಗ್ಗತ್ತಲಿನಿಂದ ಕವಿದಿರುವ ಭವಿಷ್ಯತ್ತನ್ನು ಭೇದಿಸಲು, ಪ್ರಪಂಚದ ಗುಟ್ಟನ್ನು ಒಡೆಯಲು, ದಿವ್ಯದರ್ಶನ ವನ್ನು ಸಂಪಾದಿಸಲು, ಒಂದೇ ಮಾತಿನಲ್ಲಿ ಹೇಳುವುದಾದರೆ, ಜೀವನದ ಮುಖ್ಯ ಗುರಿಯನ್ನು ಅರಿಯಲು ಪ್ರಯತ್ನಪಡುತ್ತಿದ್ದಾನೆ; ಈ ಪ್ರಯತ್ನ ಗಳೆಲ್ಲಾ ರಸವಾದಿಗಳು (Alchemists) ಸ್ಪರ್ಶಮಾತ್ರದಿಂದ ಎಲ್ಲ ಲೋಹ ಗಳನ್ನೂ ಚಿನ್ನ ಮಾಡತಕ್ಕ, ಶಾಶ್ವತ ಯೌವನವನ್ನು ಕೊಡತಕ್ಕ ಒಂದು ರಸವನ್ನು, ಒಂದು ವಸ್ತುವಿಶೇಷವನ್ನು ಸೃಷ್ಟಿಮಾಡಲು ಅನೇಕ ಪ್ರಯೋಗ ಗಳನ್ನು ಹೂಡುತ್ತಿದ್ದರಲ್ಲ, ಈ ಪ್ರಯತ್ನಗಳು ಆ ಪ್ರಯೋಗಗಳಂತೆ. ಆ ಪ್ರಯೋಗಗಳು ತತ್ಕಾಲಕ್ಕೆ ನಿಷ್ಫಲವಾದರೂ, ಮುಖ್ಯ ಗುರಿಯನ್ನು ಸಾಧಿಸುವುದರಲ್ಲಿ ವ್ಯರ್ಥವಾದರೂ, ಪ್ರಪಂಚದಲ್ಲಿ ಬಲು ಮುಖ್ಯವಾದ ರಸಾಯನ ಶಾಸ್ತ್ರದ ಉತ್ಪತ್ತಿ ಮತ್ತು ಬೆಳವಣಿಗೆಗೆ ಕಾರಣವಾದುವು. ಅದರಂತೆಯೇ ಸಾಹಿತ್ಯದ ಪ್ರಯೋಗಗಳು ಮುಖ್ಯ ಗುರಿಯನ್ನು ಇನ್ನೂ

ಸಾಧಿಸಿಲ್ಲವಾದರೂ, ಅದನ್ನು ಸಾಧಿಸುವುದಕ್ಕೆ ಮಾರ್ಗವನ್ನು ಹಾಕಿಕೊಡುತ್ತಿವೆ: ಆ ಮೂಲಕ ಜೀವನ ಮತ್ತು ಪ್ರಪಂಚದ ವಿಶಾಲತೆ, ವೈವಿಧ್ಯ ವೈಚಿತ್ರ್ಯಗಳನ್ನು ಬೆಳಕಿಗೆ ತರುತ್ತಿವೆ. ಒಟ್ಟಿನಲ್ಲಿ ಸಾಹಿತ್ಯವು ಮಾನವ ಜೀವನದ ಮಾರ್ಗದರ್ಶಿ. ಈ ಪ್ರಯೋಗಗಳೇ ನಾನು ಹಿಂದೆ ಹೇಳಿದ ಸಾಕ್ಷಾತ್ಕರಣಗಳು ; ಅವುಗಳಲ್ಲಿ ಕೆಲವು ತತ್ಕಾಲಕ್ಕೆ ಬಹು ಮುಖ್ಯವಾಗಿದ್ದು, ಜೀವನ ಪಥದಲ್ಲಿ ಮಾನವನಿಗೆ ಸ್ವಲ್ಪ ದಾರಿಯನ್ನು ತೋರಿರಬಹುದು. ಆ ಕಾಲವು ಕಳೆದಮೇಲೆ, ಕೆಲಕಾಲ ಬಾಳಿ ಬತ್ತುವ ಕೆಲ ನದಿಗಳಂತೆ, ಆ ಹಿತೋಕ್ತಿಗಳು ಅಳಿದುಹೋಗಿ ಜಳ್ಳಾಗುತ್ತವೆ. ಆದರೆ ಕೆಲವರ ನುಡಿಗಳು ಎಂದೆಂದಿಗೂ ಶಾಶ್ವತವಾಗಿ ದೀಪದಂಡಗಳಂತಿರುತ್ತವೆ. ಅವುಗಳೇ "ಮಹಾಚೇತನನೊಬ್ಬನ ಅನರ್ಘ್ಯವಾದ ಜೀವಸಾರ ; ಜೀವಿತದ ಮುಂದಿನ ಜೀವಿತಕ್ಕಾಗಿ ಶೇಖರಿಸಿದ ಜೀವಸಾರ."

ಸಾಹಿತ್ಯವು ಹೇಗೆ ಒಂದು ಸಾಕ್ಷಾತ್ಕಾರವೆಂಬುದನ್ನು ಹೇಳಿದುದಾಯಿತು. ಇನ್ನು ಚಿತ್ರಕಲೆಯ ವಿಷಯವನ್ನು ಕುರಿತು ಪ್ರಸ್ತಾಪಿಸಬೇಕಾಗಿದೆ.

ರಸ್ಕಿನ್‌ರವರು "All great art is a revelation ; and all great art is praise" ಎಂದು ಹೇಳುತ್ತಾರೆ. "ಎಲ್ಲ ಶ್ರೇಷ್ಠ ಕಲೆಯೂ ಸಾಕ್ಷಾತ್ಕರಣ, ಎಲ್ಲ ಶ್ರೇಷ್ಠಕಲೆಯೂ ಸ್ತುತಿ."

ಚಿತ್ರಗಾರನ ಚಿತ್ರಗಳಲ್ಲಿ ಸಾಕ್ಷಾತ್ಕಾರವೇನಿದೆ ? ನಾವು ಕಾಣದಿರುವ ವಸ್ತುವನ್ನೇನಾದರೂ ಚಿತ್ರಿಸುತ್ತಾನೆಯೆ ? ನಮಗೆ ಚಿತ್ರ ಬರೆಯುವ ಶಕ್ತಿಯಿಲ್ಲ, ಕಂಡದ್ದನ್ನೂ ಬರೆಯಲಾರೆವು. ಚಿತ್ರಗಾರನಿಗೆ ಚಿತ್ರ ಬರೆಯುವ ಶಕ್ತಿಯಿದೆ. ಕಂಡದ್ದನ್ನು ಕಂಡಹಾಗೆ ಬರೆಯುತ್ತಾನೆ. ಈ ಲೋಕದಲ್ಲಿಲ್ಲದಿರುವ ವಸ್ತುವನ್ನೇನಾದರೂ ಯೋಚಿಸಿಕೊಂಡು ಸುಂದರವಾಗಿ ಚಿತ್ರಿಸಿದರೆ ಆಗ ಅವನ ಶಕ್ತಿಯು ಗೊತ್ತಾಗುತ್ತದೆ. ನಮ್ಮ ಕಣ್ಣೆದುರಿಗೆ ಪ್ರಕೃತಿ ಬಣ್ಣಬಣ್ಣಗಳಿಂದ ಬಗೆಬಗೆಯಲ್ಲಿ ಮೆರೆಯುತ್ತಿರುವಾಗ ಅದರ ಪ್ರತಿಯಾದ ಒಂದು ಚಿತ್ರವು ವ್ಯರ್ಥ ಅನುಕರಣೆ, ಅದರಲ್ಲಿ ಸಾಕ್ಷಾತ್ಕಾರವೇನಿದೆ, ಎಂದು ಕೆಲವರು ಕೇಳಬಹುದು, ನ್ಯಾಯವಾಗಿಯೇ ಇದೆ ಪ್ರಶ್ನೆ. ......ಒಬ್ಬಳು ಯುವತಿ, ಚೆಲುವೆ, ಗುಣವಂತೆ ; ಗಂಡನು ತೀರಿಹೋದ. ವೈಧವ್ಯದ ವೇದನೆಯನ್ನು ತಾಳಲಾರದೆ ಗೋಳಿಡುತ್ತಾ ದಿನದಿನಕ್ಕೆ ಕೃಶಳಾಗುತ್ತಿದ್ದಾಳೆ...

ಕಣ್ಣಾರೆ ಇಂಥ ದೃಶ್ಯಗಳನ್ನು ಕಂಡು ಕಂಬನಿಗರೆಯದವನು, ಮರುಕಪಡದಿರುವವನು, ಕೊನೆಗೆ ಮನಸ್ಸಿನಲ್ಲಿಯಾದರೂ 'ಅಯ್ಯೋ' ಎನ್ನದವನು ನಾಟಕ ರಂಗದಲ್ಲಿ ಅಂಥ ದೃಶ್ಯವೊಂದನ್ನು ನೋಡಿದಾಗ ಅವನ ಹೃದಯ ಕರಗಿ ನೀರಾಗುವುದೇಕೆ? ದುಃಖಮಯವಾದ ದೃಶ್ಯವನ್ನು ಕಣ್ಣಾರೆ ಕಂಡಾಗ 'ಸಂಪೂರ್ಣ ದುಃಖ'ವು ಅವನ ಮನಸ್ಸಿಗೆ ತಟ್ಟುವುದಿಲ್ಲ. ಅವನ ಮನಸ್ಸು ಸಂಸಾರ 'ತಾಪತ್ರಯ' ದಲ್ಲಿ ಸಿಲುಕಿರುತ್ತದೆ. ಆದರೆ ನಾಟಕರಂಗದ ಪ್ರಪಂಚವೇ ಬೇರೆ. ಅಲ್ಲಿ ದುಃಖವು ತಾನೇ ತಾನಾಗಿ ಮೂರ್ತಿವೆತ್ತು ಕಾಣುತ್ತದೆ. ಆ ಸಮಯದಲ್ಲಿ ನೋಟಕನೂ ದುಃಖವನ್ನೇ ನೋಡಬೇಕೆಂದು ಬಯಸಿಬಂದಿರುವುದರಿಂದ ಸ್ವಲ್ಪಕಾಲದ ಮಟ್ಟಿಗೆ ಸಂಸಾರ ತಾಪತ್ರಯವನ್ನುಳಿದು ಪ್ರತ್ಯೇಕನಾಗಿರುತ್ತಾನೆ. ಒಂದು ಚಿತ್ರಕ್ಕೂ, ಸಂಸಾರ ಸಾಗರದ ಅಲೆಗಳ ಬಡಿತದಲ್ಲಿ ಸಿಲುಕಿ ಇತರ ಹವ್ಯಾಸಗಳಲ್ಲಿ ಮುಳುಗಿರುವವರ ಗಮನವನ್ನು ಸೆಳೆಯುವ ಶಕ್ತಿಯಿದೆ. ಈ ಶಕ್ತಿಯನ್ನೇ ಚಿತ್ರಕಲೆಯ ಸಾಕ್ಷಾತ್ಕರಣ ಶಕ್ತಿ ಎನ್ನುವುದು.

ಹೀಗೆ ಲೋಕದಲ್ಲಿ ಎಲ್ಲರಿಗೂ ಕಾಣುತ್ತಿರುವ ವಸ್ತುಗಳಲ್ಲಿ ಅಡಗಿರುವ ಸೌಂದರ್ಯವನ್ನು ಅದನ್ನರಿಯಲಾರದವರಿಗೆ, ಅದನ್ನರಿಯಲು ಲಕ್ಷ್ಯಗೊಡದಿರುವವರಿಗೆ ತೋರಿಸುವುದೇ ಚಿತ್ರಗಾರನ ಕೆಲಸ. ಹ್ಯಾಸ್‌ಲಿಟ್‌ರವರು ಹೇಳುತ್ತಾರೆ— "Nature is also a language; the true artist is the interpreter of this language." ಪ್ರಕೃತಿಯೂ ಒಂದು ಭಾಷೆ: ಆ ಭಾಷೆಯ ಅರ್ಥವನ್ನು ಸರಿಯಾಗಿ ವಿಶದಪಡಿಸುವವನೇ ನಿಜವಾದ ಕಲಾನಿಪುಣನು. ಅಲ್ಲದೆ, ಪ್ರಕೃತಿದೇವಿ ಬಹಳ ಚಂಚಲೆ; ಒಂದು ಗಳಿಗೆ ಇದ್ದಹಾಗೆ ಇನ್ನೊಂದು ಗಳಿಗೆ ಇರುವುದಿಲ್ಲ; ಬಗೆಬಗೆಯ ರೂಪವನ್ನು ತಾಳುತ್ತಲೇ ಇರುತ್ತಾಳೆ. ಈ ಮಾರ್ಪಾಡುಗಳು ನಮಗೆ ಅಗೋಚರ. ಅದನ್ನು ಕಲಾನಿಪುಣನು ಕಲೆಯ ಬಲೆಯಲ್ಲಿ ಬಿಗಿದು ನಮಗೆ ತೋರಿಸುತ್ತಾನೆ.

ಕೊಡಗಿಗೆ ಹೋಗಿರುವವರಿಗೆ "ಕೊಡಗಿನ ಬೆಡಗು" ಗೊತ್ತು.

"ಗಿರಿಗಳ ಕಂದರಗಳ ನಿ–।
ರ್ಝರಿಗಳ ವಿಪಿನಗಳ ವಕ್ರಪಥಗಳ ದರ ಸುಂ–॥

ದರ ಶಮಂಕರ ರೂಪಂಗಳ—।
ನರಿವೊಡೆ ನೀಂ ನಡೆ ದುನೋಡು ಕೊಡಗಿನ ಬೆಡಗಂ ॥"

ಕೊಡಗನ್ನು ನೋಡುವುದಕ್ಕೆ ಹೋದಾಗ—ಮಳೆಯಿಲ್ಲದ ಬೇಸಗೆ ಚೆನ್ನು ಅದರ ಅಂದವನ್ನು ನೋಡುವುದಕ್ಕೆ!—ಹೋದಾಗ ಅಲ್ಲಿ ಒಂದು ಎತ್ತರವಾದ ಗುಡ್ಡದಮೇಲೆ ನಿಂತು ಸುತ್ತ ನೋಡಿ ಹಿಂದಿರುಗಿ ಬಂದಮೇಲೆ ಕೊಡಗಿನಲ್ಲಿ ಏನೇನನ್ನು ನೋಡಿದಿರೆಂದು ಕೇಳಿದರೆ ಏನೆಂದು ಹೇಳುವಿರಿ? ಪ್ರಾಯಶಃ ಹೀಗೆ ಹೇಳುವಿರಿ:—"ಆಹ, ಎಷ್ಟು ಚೆನ್ನಾಗಿತ್ತು, ಏನು ಕಥೆ. ಮೋಟಾರಿನಲ್ಲಿ ಹೋಗುವಾಗ ಆ ಕಾಫಿ ಹೂವಿನ ಪರಿಮಳ ... ಆ ತಂಗಾಳಿ!...ನಿಂತು ನೋಡಿದರೆ ಗುಡ್ಡಗಳು, ಗಿಡಗಳು—ಎಲ್ಲಾ ಬಹಳ ಚೆನ್ನಾಗಿತ್ತು. ಹೇಳಿದರೆ ಸುಖವಿಲ್ಲ ಸ್ವಾಮಿ, ನೀವೇ ಕಣ್ಣಾರೆ ನೋಡಬೇಕು." ಎನ್ನುವಿರಿ. ನೀವು ನಿಜವಾಗಿಯೂ ಕೊಡಗಿನ ಸೊಬಗನ್ನು ಅನುಭವಿಸಿದ್ದೀರಿ, ನಿಜವಾಗಿಯೂ ಆ ಸೊಗಸನ್ನು ನೋಡಿ ನಿಮ್ಮ ಹೃದಯ ಉಬ್ಬಿದೆ. ಆದರೆ ಹಿಂದಿರುಗಿ ಬಂದಾಗ ನಿಮ್ಮ ಮನಸ್ಸಿನಲ್ಲಿ ಏನುಳಿದಿರುತ್ತೆ? ಚಿರೋಟಿಯನ್ನು ತಿಂದು ಅದರ ರುಚಿಯನ್ನು ನೆನಸಿಕೊಂಡಂತೆ! ನೀವು ಹಿಂದಿರುಗಿ ಬಂದಮೇಲೆ ಒಬ್ಬ ಚಿತ್ರಗಾರನು ಚಿತ್ರಿಸಿರುವ ಒಂದು ಚಿತ್ರವನ್ನು ನೋಡಿ. ಆವಾಗ ತಲೆದೂಗುತ್ತೀರಿ; ಆಹ, ನೀಲಿಯ ಆಕಾಶ, ಸ್ವಚ್ಛವಾಗಿದೆ. ಕೆಳಗೆ ಹಸುರಿನಿಂದ ಕೂಡಿದ ಗುಡ್ಡಗಳು, ದೂರದಲ್ಲಿರುವ ಗುಡ್ಡಗಳು, ಹೇಗಿದೆ! ಬರಿಯ ಹಚ್ಚ ಹಸುರು. ಬರುಬರುತ್ತ, ಆ ಹಸುರು ಕರಗಿ ನವಿಲಿನ ಬಣ್ಣ, ಕೊನೆಗೆ ನೀಲಿ, ಇನ್ನೂ ದೂರದಲ್ಲಿ ಆ ಗುಡ್ಡದ—ಇನ್ನು ಗುಡ್ಡವೆಲ್ಲಿದೆ!—ಬರಿಯ ನೀಲಿ, ಕೊನೆಗೆ ಆ ನೀಲಿಯೂ ಕರಗಿ, ಏನಾದರೂ ನೀರಾಗಿ ಹರಿಯುತ್ತಿದೆಯೋ— ಕಣ್ಣು ಹರಿಯುವವರೆಗೂ ಆ ನೀಲಿ ಕಾಣುತ್ತದೆ. ಅದರ ಆಳವೆಷ್ಟಿರ ಬಹುದು...ಏನು ವಿಚಿತ್ರವಾಗಿದೆ ಈ ಚಿತ್ರ. ಎಲ್ಲಾ ದೇವರ ಮಹಿಮೆ! ಎಂದು ಕೂಂಡಾಡುವಿರಿ. ನಿಜವಾದ ಕೊಡಗನ್ನು ನೋಡಿದಾಗ ಮೂಡದ ಭಾವಗಳು ಈಗೆಂತು ಮೂಡಿದವು? ಅದು ಚಿತ್ರಗಾರನ ಶಕ್ತಿ! ಅವನ ಮಾಯೆ! ನೀವು ನೋಡಿದುದನ್ನೇ ಅವನೂ ನೋಡಿದ್ದು. ಆದರೆ ನೀವು ಬರಿಯ ಗುಡ್ಡಗಳು, ಗಿಡಗಳು, ಇವುಗಳ ಹೊರರೂಪವನ್ನು ಮಾತ್ರ ನೋಡುತ್ತಿರುವಿರಿ. ಚಿತ್ರಗಾರನು ಎಲ್ಲವನ್ನೂ ಒಳಹೊಕ್ಕು, ಆ ನೀಲಿಯಾಳ

ವಲ್ಲಿ ಕಲಿತು, ಆ ಗುಪ್ತಗಳನ್ನು ಭೇದಿಸಿ ಆ ಪ್ರಕೃತಿಚಿತ್ರದ ಅಂತರಾತ್ಮದಲ್ಲಿ ಒಂದಾಗುತ್ತಾನೆ ; ಅದನ್ನು ಅನುಭವಿಸಿ ಅದನ್ನು ಮೆಚ್ಚಿ ಅದರ ಸಾರವನ್ನು ತನ್ನ ಕೈವಶಮಾಡಿಕೊಂಡು, ತನ್ನ ಚಿತ್ರದಲ್ಲಿ ನೋಡುವವರಿಗೆ ತೋರಿಸುತ್ತಾನೆ. ಪ್ರಕೃತಿಯ ಮುಸುಕನ್ನು ತೆರೆದು, ಅದರ ಒಳಗಡೆ ಅಡಗಿರುವ ಆ ಸೌಂದರ್ಯಾತಿಶಯವನ್ನು, ಜ್ಯೋತಿರ್ಮಯವಾದ ಆ ಚೈತನ್ಯಸ್ವರೂಪವನ್ನು ಚಿತ್ರಿಸಿ ತೋರಿಸುತ್ತಾನೆ. ನಿಜವಾದ ಕಲಾಕೋವಿದನು ನೋಡುತ್ತಾನೆ, ನೋಡಿ ಅನುಭವಿಸುತ್ತಾನೆ ; ಇತರರನ್ನೂ ನೋಡುವಂತೆ, ನೋಡಿ ಅನುಭವಿಸುವಂತೆ ಮಾಡುತ್ತಾನೆ. ಕವಿಯಾದವನು ಮಾತುಗಳಿಂದ ಏನು ಕಾರ್ಯ ಮಾಡುತ್ತಾನೆಯೋ ಅದೇ ಕೆಲಸವನ್ನು ಚಿತ್ರಗಾರನು ಬಣ್ಣದಿಂದ ಚಿತ್ರಿಸುತ್ತಾನೆ, ಶಿಲ್ಪಿಯು ಕಲ್ಲಿನಿಂದ ಕಡೆಯುತ್ತಾನೆ. ಕವಿಯ ಕುಶಲಕರ್ಮ ಕಾವ್ಯ, ಸಾಹಿತ್ಯ. ಚಿತ್ರಗಾರನ ಕುಶಲಕರ್ಮ ಚಿತ್ರಕಲೆ. ಇಂತು ಚಿತ್ರಕಲೆ ಪ್ರಕೃತಿಯೊಂದೇ ಅಲ್ಲ, ಜೊತೆಗೆ ಮಾನವಪ್ರಪಂಚ, ಮಾನವಜೀವನದ ಘಟನಾರಹಸ್ಯ—ಇವುಗಳ "ಕಾಣುವ ಗುಟ್ಟಿನ" ಸಾಕ್ಷಾತ್ಕಾರ, ಕಣ್ಣಿಟ್ಟು ನೋಡುವವನ ಭಾಗಕ್ಕೆ ಒಂದು ಸಾಕ್ಷಾತ್ಕರಣ.

ಈ ಸಾಕ್ಷಾತ್ಕರಣಶಕ್ತಿಯುಳ್ಳವನೇ ನಿಜವಾದ ಚಿತ್ರಗಾರ. ಸಾಕ್ಷಾತ್ಕರಣವೆಂದರೇನೆನ್ನುವುದನ್ನು ಸಾಹಿತ್ಯದ ವಿಷಯವನ್ನು ಕುರಿತು ಪ್ರಸ್ತಾಪಿಸುವಾಗ ಸೂಚಿಸಿದ್ದೇನೆ. ಈ ಶಕ್ತಿ ದೈವದತ್ತವಾದುದು, ಎಲ್ಲರಲ್ಲಿಯೂ ಇರುವುದಿಲ್ಲ. ಅದನ್ನು ಉಪಯೋಗಿಸಿಕೊಳ್ಳುವುದೂ ಬಿಡುವುದೂ ಅವನ ಕೈಯಲ್ಲಿದೆ. ಆ ಶಕ್ತಿಯನ್ನು ಹಾಳುಮಾಡಿಕೊಳ್ಳುವುದು ಬಲು ಸುಲಭ ; ಅದನ್ನು ಉಪಯೋಗಿಸಿಕೊಳ್ಳುವುದು ಸ್ವಲ್ಪ ಶ್ರಮಸಾಧ್ಯ.

ಅರಿಸ್ಟಾಟಲ್‌ರವರು ಸಾಹಿತ್ಯಪ್ರಪಂಚವನ್ನು ಒಂದು ಅನುಕರಣೆಯ ಪ್ರಪಂಚದ ಸೃಷ್ಟಿಯೆಂದು ಕರೆದಿರುತ್ತಾರೆಂದು ಹಿಂದೆ ಪ್ರಸ್ತಾಪಿಸಿದ್ದೆ. ಅದರಂತೆಯೇ ಚಿತ್ರಕಲೆಯೂ ನಿಜವಾದ ಪ್ರಪಂಚದ ಒಂದು ಅನುಕರಣೆ ಮಾತ್ರ ಎಂದು ಅನೇಕರ ಅಭಿಪ್ರಾಯ. ಇದು ಸ್ವಲ್ಪಮಟ್ಟಿಗೆ ಸತ್ಯವಾದುದು. "Nothing can come out of nothing." ಆದ್ದರಿಂದ ಚಿತ್ರಕಲೆ ಬಾಹ್ಯಪ್ರಪಂಚದ ಅನುಕರಣೆಯಾಗಿರುವುದು ಸಹಜವಾಗಿಯೇ ಇದೆ. ಎಲ್ಲ ಕಲೆಯಲ್ಲೂ ಅನುಕರಣೆ ಆವಶ್ಯಕ, ಅಗತ್ಯ ಎಂದು ಹಿಂದೆ

ಹೇಳಿದ್ದೇನೆ. ಆದರೂ, ಚಿತ್ರಕಲೆ ಬರಿಯ ಅನುಕರಣೆಯಾಗಿದ್ದ ಪಕ್ಷದಲ್ಲಿ ಅದಕ್ಕೆ ಈಗ ಸಾಹಿತ್ಯದ ಜೊತೆಯಲ್ಲಿ ಯಾವ ಸ್ಥಾನ ದೊರೆತಿದೆಯೋ ಆ ಸ್ಥಾನ ದೊರೆಯುತ್ತಿರಲಿಲ್ಲ. ಚಿತ್ರಕಲೆ ಬರಿಯ ಅನುಕರಣೆಯೊಂದೇ ಅಲ್ಲ, ಇನ್ನೂ ಹೆಚ್ಚಿನದು. ಚಿತ್ರಕಲೆ ಜನಸಾಮಾನ್ಯಕ್ಕೆಲ್ಲಾ ಕಾಣುವ ಹೊರ ಆಕಾರವೊಂದನ್ನೇ ಅಲ್ಲ ಚಿತ್ರಿಸುವುದು. ಅದರ ಆತ್ಮಸ್ವರೂಪವನ್ನು ವ್ಯಕ್ತಪಡಿಸುತ್ತದೆ. ಇದನ್ನು ಒಂದು ಉದಾಹರಣೆಯಿಂದ ಸ್ಪಷ್ಟಪಡಿಸುತ್ತೇನೆ. ಒಬ್ಬ ಮನುಷ್ಯನ ಛಾಯಾಚಿತ್ರವೊಂದನ್ನು ತೆಗೆಯಿಸೋಣ. ಅದರಲ್ಲಿ ಎಲ್ಲವೂ ಚಾಚೂ ತಪ್ಪದೆ ಮನುಷ್ಯನ ಆಕಾರವು ಸರಿಯಾಗಿ ಪ್ರತಿಬಿಂಬಿತವಾಗಿರುತ್ತದೆ. ಮೂಗಿನ ಮೇಲೊಂದು ಬೊಕ್ಕೆಯಿದ್ದರೆ ಅದಕ್ಕೂ ಸ್ಥಳವುಂಟು ಛಾಯಾಚಿತ್ರದಲ್ಲಿ. ಛಾಯಾಚಿತ್ರವು ಅಷ್ಟು ಸತ್ಯವಾದ ಪ್ರತಿಬಿಂಬ. ಒಬ್ಬ ಉತ್ತಮ ಕಲಾನಿಪುಣನಿಂದ ಅದೇ ಮನುಷ್ಯನ ಭಾವ ಚಿತ್ರವೊಂದನ್ನು ಬರೆಸೋಣ. ಭಾವಚಿತ್ರವೂ ಎಂದಿಗೂ ಛಾಯಾಚಿತ್ರದಷ್ಟು ಸತ್ಯಪ್ರತಿಬಿಂಬವಲ್ಲ. ಅದರಲ್ಲಿ, ಆಕಾರವು ಛಾಯಾಚಿತ್ರದಷ್ಟು ಚೆನ್ನಾಗಿಲ್ಲದೇ ಇರಬಹುದು. ಆದರೂ ಅವೆರಡನ್ನು ಯಾರಿಗಾದರೂ ತೋರಿಸಿದರೆ ಭಾವಚಿತ್ರವೇ ಅವರ ಮೆಚ್ಚುಗೆಗೆ ಪಾತ್ರವಾಗುವುದರಲ್ಲಿ ಸಂದೇಹವಿಲ್ಲ. ಕಾರಣವೇನು ? ಛಾಯಾಚಿತ್ರದಲ್ಲಿ ಎಲ್ಲವೂ ಸರಿಯಾಗಿದೆ. ಆದರೆ ಆತ್ಮದ ಮುದ್ರೆ ಮುಖದಲ್ಲಿ ಕಾಣುತ್ತಿಲ್ಲ, ಮುಖದಲಿ ಜೀವಕಳೆಯಿಲ್ಲ. ಭಾವಚಿತ್ರವನ್ನು ತೆಗೆದುಕೊಳ್ಳಿ. ಮೂಗು ಸ್ವಲ್ಪ...ಒಂದು ಹಂಚಿಕಡ್ಡಿಯಷ್ಟು ಮೊಟಕಾಗಿದೆ, ದಿಟ ; ಮೀಸೆ ಕೂಡಿ ಸ್ವಲ್ಪ ಹೆಚ್ಚು : ಬಣ್ಣಗೆಲಸವು ಅಷ್ಟು ನಯವಾಗಿಲ್ಲ, ಒಪ್ಪಿಕೊಳ್ಳೋಣ. ಆದರೆ ಆ ಕಣ್ಣಿನ ಹೊಳಪು, ನಗದಿದ್ದರೂ ನಗೆಯನ್ನು ಚೆಲ್ಲುವ ಆ ತುಟಿಗಳು, ಮಾತನಾಡಿಸಿದರೆ ಮಾತನಾಡುವುದೋ ಎಂಬಂತೆ ತೋರುವ ಆ ಮುಖಭಾವ—ಇವು ಎಲ್ಲವೂ ಯಾವುದೋ ರೀತಿಯಲ್ಲಿ ಮಿಳಿತವಾಗಿ ಭಾವಚಿತ್ರಕ್ಕೆ ಎಲ್ಲೂ ಇಲ್ಲದೊಂದು ಜೀವಕಳೆಯನ್ನು ತುಂಬುವುದು. ಇದು ಒಂದು ರಹಸ್ಯ ಸಾಕ್ಷಾತ್ಕರಣವಲ್ಲವೆ ? ಈ ಸಾಕ್ಷಾತ್ಕರಣವಿಲ್ಲದ ಚಿತ್ರಕಲೆ ಕಲೆಯೇ ಅಲ್ಲ. ಚಿತ್ರಕಲೆಯಲ್ಲಿ ಅನುಕರಣೆ ಮುಖ್ಯವಲ್ಲ. ಪ್ರಕೃತಿಯ ಅಥವಾ ಮನುಷ್ಯನ ಆತ್ಮದ ಸ್ವರೂಪವನ್ನು ತೋರುವುದೇ ಚಿತ್ರಕಲೆಯ ಅಂತ್ಯದ ಗುರಿಯಾಗಿರಬೇಕು.

To snatch this grace beyond the reach of art is then the height of art–where fine art begins ಎಂದು ಹ್ಯಾಸ್‌ಲಿಟ್‌ ರವರು ಹೇಳುತ್ತಾರೆ. ಸೌಂದರ್ಯವೋ, ಸತ್ಯವೋ, ಆತ್ಮವೋ, ರಹಸ್ಯವೋ ಯಾವುದಾದರೂ ಆಗಲಿ, ಆ ಅಂತ್ಯದ ಗುರಿಯನ್ನು ಮುಟ್ಟಲು ಅನುಕರಣೆ ಸಾಧನ ಮಾತ್ರ. ಅನುಕರಣೆಯು ಕೈಮೀರಿದ ಆ ರಹಸ್ಯ ಪ್ರಕಾಶದ ಪ್ರಯತ್ನವೇ ಉತ್ತಮ ಕಲೆಯ ಉನ್ನತಿ, ಕುಶಲ ಕಲೆಯ ಮೊದಲನೆಯ ಮೆಟ್ಟಲು,

ರಸ್ಕಿನ್‌ರವರು 'All great art is praise'—"ಎಲ್ಲ ಕಲೆಯೂ ಸ್ತುತಿ" ಎಂದು ಹೇಳುತ್ತಾರೆ. ಇದರ ಅರ್ಥವೇನು ?—ಚಿತ್ರಗಾರನು ಈ ಪ್ರಪಂಚದ ಸೌಂದರ್ಯವನ್ನು ನೋಡಿ ಅದನ್ನು ಅನುಭವಿಸುತ್ತಾನೆ, ಅನುಭವಿಸಿ ಆನಂದಪಡುತ್ತಾನೆ. ಸಂಗೀತಗಾರನು ತನ್ನ ಅನುಭವದ ಆನಂದ ಲಹರಿಯನ್ನು ಸುಸ್ವರದ ಮೂಲಕ ಹರಿಸಿಬಿಡುವಂತೆ, ಚಿತ್ರಗಾರನು ಸ್ವಾನುಭವದ ಆನಂದಕ್ಕೆ ಬಣ್ಣದಿಂದ ರೂಪುಗೊಡುತ್ತಾನೆ. ಆ ರೂಪಾಂತರವೇ ಚಿತ್ರಕಲೆ. ಆದುದರಿಂದ ಒಬ್ಬ ಚಿತ್ರಗಾರನ ಚಿತ್ರದಲ್ಲಿ ಪ್ರಪಂಚದ ಸೌಂದರ್ಯವೊಂದನ್ನೇ ಅಲ್ಲ ಕಾಣುವುದು, ಅವನ ವ್ಯಕ್ತಿತ್ವದ ಮುದ್ರೆಯೂ ಅದರಲ್ಲಿ ವ್ಯಕ್ತವಾಗಿರುತ್ತದೆ. ಅವನ ಹೃದಯದ ರಸಿಕತೆ, ಅವನ ಕಲ್ಪನಾಶಕ್ತಿಯ ಸಾಮರ್ಥ್ಯ, ಅವನ ಆತ್ಮದ ಮಹಿಮೆ, ಪ್ರಪಂಚದ ವಿಷಯದಲ್ಲಿ ಅವನ ಅಭಿಪ್ರಾಯ—ಇವೆಲ್ಲವೂ ಅದರಲ್ಲಿ ವ್ಯಕ್ತವಾಗಿರುತ್ತವೆ. ಆದುದರಿಂದ ಆನಂದವೇ ಚಿತ್ರಕಲೆಯ ಮೂಲ.

ಸಾಕ್ಷಾತ್ಕರಣಗಳೇನೆಂಬುದನ್ನು ಸಾಹಿತ್ಯದ ವಿಷಯವನ್ನು ಪ್ರಸ್ತಾಪಿಸುವಾಗ ವಿಶದವಾಗಿ ತಿಳಿಸಿರುತ್ತೇನೆ, ಚಿತ್ರಕಲೆಯಲ್ಲಿ ಇಂಥ ಸಾಕ್ಷಾತ್ಕರಣಗಳಿಲ್ಲದೇ ಹೋದರೆ ಅದು ಉತ್ತಮ ಚಿತ್ರಕಲೆಯಾಗುವುದಿಲ್ಲವೇ? ಆಗುವುದಿಲ್ಲವೆಂದೇ ನನ್ನ ಭಾವನೆ.

ದೇಹವಿಲ್ಲದೆ ಆತ್ಮವಿಲ್ಲ: ಆತ್ಮವಿಲ್ಲದೆ ದೇಹವಿಲ್ಲ: ಆದುದರಿಂದ, ಚಿತ್ರಕಲೆಯ ದೇಹ—ಅಂದರೆ ಬಣ್ಣದ ಬರವಣಿಗೆ, ಮತ್ತು ಚಿತ್ರಕಲೆಯ ಆತ್ಮ—ಅಂದರೆ ಒಂದು ಚಿತ್ರದ ಸಾಕ್ಷಾತ್ಕರಣ ಶಕ್ತಿ—ಇವುಗಳ ವಿಷಯವಾಗಿ ಒಂದೆರಡು ಮಾತು ಹೇಳುತ್ತೇನೆ.

ಮುಖ್ಯವಾಗಿ ಉತ್ತಮ ಚಿತ್ರಕಲೆಯಲ್ಲಿ ಕೆಲವಂಶಗಳಿದ್ದೇ ಇರಬೇಕು. (೧) ವರ್ಣರಚನಾಕ್ರಮ ಮೊದಲ್ಗೊಂಡು ಅತ್ಯುನ್ನತ ಭಾವಪ್ರಕಾಶಕ್ಕೆ ಕಾರಣವಾದ ಚಿತ್ರಗಾರನ ಸ್ವಾನುಭವಪ್ರಕಾಶಕ ಶಕ್ತಿ; ಬೇಕಾದರೆ ಸ್ಥೂಲ ವಾಗಿ "ಕಲಾಶಕ್ತಿ" ಎಂದು ಹೇಳಬಹುದು. (೨) ಅನುಕರಣೆಯ ರೀತಿ —ಅನುಕರಣೆ ಉತ್ತಮವಾದುದೇ ಅಥವಾ ಕೀಳಾದುದೇ. ಉತ್ತಮ ಅನುಕರಣೆ ಎಂದಿಗೂ ಮೂಲವಸ್ತುವಿನ ಅಚ್ಚಳಿಯದ ಪ್ರತಿಬಿಂಬವಲ್ಲ: ಅದರ ಅಂತರ್ಭಾವದ ಸಾಕ್ಷಾತ್ಕಾರ. (೩) ಸತ್ಯ—ಇಲ್ಲಿ ಸತ್ಯವೆಂದರೆ, ಕಣ್ಣಿಗೆ ಹೇಗೆ ಕಾಣುತ್ತದೋ ಹಾಗೆ ಚಿತ್ರಿಸುವ ವಿಷಯದಲ್ಲಿ ಅಲ್ಲ; ಅದು ಕೀಳ್ತರದ ಅನುಕರಣೆಯ ವಿಷಯವಾಯಿತು. ಇಲ್ಲಿ ಸತ್ಯವೆಂದರೆ, ಚಿತ್ರ ಗಾರನು ತಾನು ಚಿತ್ರಿಸುವುದನ್ನು ತನ್ನ ಹೃದಯದ ಕಣ್ಣಿಗೆ ಹೇಗೆ ಕಾಣು ತ್ತದೆಯೋ ಹಾಗೆ ಚಿತ್ರಿಸುವುದರಲ್ಲಿ ಎಷ್ಟರಮಟ್ಟಿಗೆ ಉತ್ತೀರ್ಣನಾಗಿದ್ದಾನೆ ಎಂಬುದು. ಒಂದು ಉದಾಹರಣೆಯನ್ನು ಕೊಡುತ್ತೇನೆ. ಒಬ್ಬ ಚಿತ್ರ ಗಾರನು ಒಬ್ಬ ಭಿಕ್ಷುಕನನ್ನು ನೋಡಿಕೊಂಡು ಒಂದು ಚಿತ್ರವನ್ನು ಚಿತ್ರಿಸು ತ್ತಾನೆಂದು ಇಟ್ಟುಕೊಳ್ಳೋಣ. ಆ ಭಿಕ್ಷುಕನು ತಲೆಗೆ ಸುತ್ತಿಕೊಂಡಿರುವ ಬಟ್ಟೆಯ ನೆರಿಗೆಗಳನ್ನು ಸ್ವಲ್ಪವೂ ತಪ್ಪಿಲ್ಲದೆ ಎಷ್ಟಿವೆಯೋ ಅಷ್ಟನ್ನು ಚಿತ್ರಗಾರ ಬರೆದಿರುತ್ತಾನೆಯೋ ಇಲ್ಲವೇ ಎಂಬಲ್ಲಿ ನಮಗೆ ಸತ್ಯ ಬೇಕಿಲ್ಲ. ಆ ವಿಷಯದಲ್ಲಿ ಅಸತ್ಯವಿದ್ದರೂ ಬಾಧಕವಿಲ್ಲ; ಚಿತ್ರಕ್ಕೆ ಕುಂದಿಲ್ಲ. ಆದರೆ, ಆ ಭಿಕ್ಷುಕನ ಮುಖದಲ್ಲಿ ತಾನೇತಾನಾಗಿ ಕಾಣುವ ಆ ದೈನ್ಯತೆ, ಜೀವನದಲ್ಲಿ ಬೇಸರ, ಆದರೂ ದೇವರಲ್ಲಿ ಒಂದು ವಿಧವಾದ ಭಕ್ತಿ—ಈ ಭಾವಗಳನ್ನು ಎಷ್ಟರ ಮಟ್ಟಿಗೆ ಚಿತ್ರಗಾರ ತಂದಿದಾನೆ ಎಂಬಲ್ಲಿ ಸತ್ಯವನ್ನು ಹುಡುಕಬೇಕು. (೪) ಚಿತ್ರಕಲೆಯಲ್ಲಿ ಸೌಂದರ್ಯ—ಇಲ್ಲಿ ಸೌಂದರ್ಯವೆಂದರೆ ಮನುಷ್ಯನ ಕಾಮಾದಿ ರಾಗ ಭಾವಗಳನ್ನು ಉದ್ರೇಕಗೊಳಿಸುವ ಅಥವಾ ತೃಪ್ತಿಗೊಳಿಸುವ ಸೌಂದರ್ಯ ವಲ್ಲ. ಯಾವ ಸೌಂದರ್ಯಾನುಭವದಿಂದ ನಮ್ಮ ಹೃದಯವು ಪರಿಶುದ್ಧವಾಗಿ ಪ್ರಪಂಚಕ್ಕೂ ನಮಗೂ ನಡುವೆ ಇರುವ ತೆರೆ ಸ್ವಲ್ಪಮಟ್ಟಿಗೆ ಮಾಯವಾಗು ವುದೋ ಆ ಸೌಂದರ್ಯ. ಇಲ್ಲಿ ಸೌಂದರ್ಯವನ್ನುವುದಕ್ಕೆ ಒಂದು ನಿಷ್ಕೃಷ್ಟಾರ್ಥ ವಿಲ್ಲ, ಅದರ ವಿವರಣೆ ಒಂದೆರಡು ಮಾತಿನ ಹಿಡಿತಕ್ಕೆ ಸಿಕ್ಕುವುದು ಕಷ್ಟ. (೫) ಕೊನೆಯದಾಗಿ, ಮೇಲೆ ಹೇಳಿದ ಭಾವಗಳನ್ನೆಲ್ಲಾ ಒಂದು ಸಂವಿಧಾನ

ದಲ್ಲಿ ಚಿತ್ರಿಸಿರುವುದರಲ್ಲಿ ಕಾಣುವ ಬುದ್ಧಿ ಶಕ್ತಿ. ಉತ್ತಮವಾದ ಚಿತ್ರದಲ್ಲಿ ಈ ಅಂಶಗಳೆಲ್ಲವೂ ಅತ್ಯಂತ ಹೆಚ್ಚಾದ ಪರಿಮಾಣದಲ್ಲಿ ವ್ಯಕ್ತವಾಗಿರಬೇಕಾಗಿಲ್ಲ. ಹಾಗೆ ಎಲ್ಲವೂ ಒಟ್ಟಿಗೆ ಒಂದೇ ಪರಿಮಾಣದಲ್ಲಿ ವ್ಯಕ್ತವಾಗಿರುವುದು ಸಾಧ್ಯವೂ ಅಲ್ಲ. ಕೆಲವಂಶಗಳು ಹೆಚ್ಚಾಗಿ ಪ್ರಕಾಶವಾಗಿದ್ದು ಉಳಿದವು ಸ್ವಲ್ಪವಿರಬಹುದು.

ಈ ಅಂಶಗಳೆಲ್ಲವನ್ನೂ ಒಳಗೊಂಡಿರುವ ಒಂದು ಚಿತ್ರವನ್ನು ಉದಾಹರಣೆಗಾಗಿ ತೆಗೆದುಕೊಳ್ಳೋಣ. ಜಗದ್ವಿಖ್ಯಾತರಾದ, ನಮ್ಮ ಕನ್ನಡ ಮಾತೆಯ ಸುಪುತ್ರರಾದ, ಕೆ. ವೆಂಕಟಪ್ಪನವರ ಹೆಸರನ್ನು ನೀವೆಲ್ಲರೂ ಕೇಳಿರಬಹುದು. ಈಗ ಕೆಲವು ವರ್ಷಗಳ ಹಿಂದೆ–ನನಗೆ ಚೆನ್ನಾಗಿ ನೆನಪಿಲ್ಲ, ಐದನೆಯ ಫಾರಂನಲ್ಲಿ ಓದುತ್ತಿದ್ದೆನೆಂದು ಕಾಣುತ್ತದೆ–ಆಗ ಜೆ. ಎಚ್. ಕಸಿನ್ಸ್‌ರವರು ಮೈಸೂರಿಗೆ ದಯಮಾಡಿಸಿದ್ದರು. ಆ ಸಂದರ್ಭದಲ್ಲಿ, ನಮ್ಮ ಭರತ ಖಂಡದ ಪ್ರಖ್ಯಾತರಾದ ಕಲಾನಿಪುಣರ ವರ್ಣಚಿತ್ರಗಳನ್ನು ಸಂಗ್ರಹಿಸಿ ಅದನ್ನು ನಮ್ಮ ಯೂನಿವರ್ಸಿಟಿ ಯೂನಿಯನ್ನಿನಲ್ಲಿ ಪ್ರದರ್ಶಿಸಿದ್ದರು. ಅವುಗಳಲ್ಲಿ ವೆಂಕಟಪ್ಪನವರ ಚಿತ್ರಗಳೂ ಇದ್ದವು. ಅಂದೇ ನನಗೆ ವೆಂಕಟಪ್ಪನವರ ಚಿತ್ರಗಳ ಪರಿಚಯವಾಯಿತು. ಅದಕ್ಕೂ ಹೆಚ್ಚಿನದಾಗಿ ಚಿತ್ರಗಾರರ ಪರಿಚಯವೇ ಆಯಿತು. ಅವರ ಸುಪ್ರಸಿದ್ಧ ಚಿತ್ರಗಳಲ್ಲೊಂದಾದ ಮಹಾಶಿವರಾತ್ರಿಯನ್ನು ಮೇಲೆ ಹೇಳಿದ ಅಂಶಗಳಿಗೆ ಉದಾಹರಣೆಯನ್ನಾಗಿ ತೆಗೆದುಕೊಳ್ಳುತ್ತೇನೆ. ಆ ಚಿತ್ರವನ್ನು ನೋಡಿ ಬಹಳ ದಿನಗಳಾದುವು. ಆದರೂ, ಈಗಲೂ ಆ ಚಿತ್ರವು ನನ್ನ ನೆನಪಿನಲ್ಲಿ ಕಣ್ಣಿಗೆ ಕಟ್ಟಿದಂತೆ ಕಾಣುತ್ತಿದೆ. ವೆಂಕಟಪ್ಪನವರ ಅಸದೃಶವಾದ ಬಣ್ಣಗೆಲಸದ ನೈಪುಣ್ಯವನ್ನು ನೋಡಬೇಕಾದರೆ ಆ ಚಿತ್ರದಲ್ಲಿಯೇ.

'ಮಹಾಶಿವರಾತ್ರಿ'ಯ ವಿಷಯವನ್ನೇ ಒಳಗೊಂಡ ರವಿವರ್ಮರ ಚಿತ್ರವೊಂದಿದೆ. ಅದರ ವಿಷಯವಾಗಿ ಒಂದೆರಡು ಮಾತನ್ನು ಹೇಳಿದರೆ ವೆಂಕಟಪ್ಪನವರ ಚಿತ್ರದ ಮಹತ್ವವು ಗೊತ್ತಾಗುವುದು.

ರವಿವರ್ಮರ ಚಿತ್ರದಲ್ಲಿ ಒಬ್ಬ ಯುವತಿ–ಸುಂದರಿ, ಭಕ್ತಳು, ಒಂದು ದೇವಸ್ಥಾನವನ್ನು ಪ್ರವೇಶಮಾಡುತ್ತಿದ್ದಾಳೆ. ಅವಳ ನಿಲುವಿನ ಭಂಗಿ, ನಮ್ಮ ಕಡೆಗೆ ನಟ್ಟಿರುವ ನೋಟ, ಇವನ್ನು ನೋಡಿದರೆ ಅವಳ ಕಾರ್ಯವು ದೇವಸ್ಥಾನಕ್ಕೆ ಹೋಗುವುದಲ್ಲವೆಂದು ಶಂಕೆಯಾಗುತ್ತದೆ. ಅಲ್ಲದೆ, ಈಶ್ವರನ

ಗುಡಿಯಲ್ಲಿರಬೇಕಾದ (ಬಸವ) ನಂದಿ ಒಂದನ್ನು ಬಿಟ್ಟರೆ, ದೇವಸ್ಥಾನವು ದೇವಸ್ಥಾನದಂತೆಯೇ ಕಾಣುವುದಿಲ್ಲ. ಅಲ್ಲದೆ, ಶಿವನು ಬಹಳ ಪುಣ್ಯ ಮಾಡಿದ್ದ! ಗುಡಿಯ ಮುಂದೆ, ಈಗಿನ ಕಾಲದ ಬಂಗಲೆಗಳ ಮುಂದೆ ಹಬ್ಬಿಸಿರುವಂತೆ, ಒಂದು ಗುಲಾಬಿಯ ಗಿಡ ಬೇರೆ ಹಬ್ಬಿದೆ! ಆ ಚಿತ್ರದಲ್ಲಿ ಸಾಕ್ಷಾತ್ಕರಣವೆನ್ನುವುದು ಎಳ್ಳಷ್ಟೂ ಇಲ್ಲ. ಆ ಚಿತ್ರದಲ್ಲಿ ಬಸವಣ್ಣನೊಬ್ಬನಿಲ್ಲದೇ ಹೋದರೆ – ಆ ನಾರೀಮಣಿ ಯಾರ ಮನೆಗೋ ವೈಯಾರದಿಂದ ಎಳ್ಳು ಬೀರುವುದಕ್ಕೆ ಹೋಗುತ್ತಿರುವಂತೆ ಕಾಣುತ್ತದೆ!

ವೆಂಕಟಪ್ಪನವರ ಚಿತ್ರವನ್ನು ತೆಗೆದುಕೊಳ್ಳಿ: ಕಂಬಸಾಲಿನ ದೇವಸ್ಥಾನ; ದೇವಸ್ಥಾನದ ಮುಂಬಾಗಿಲಿನ ಸುತ್ತಲೂ ಗೂಡುಗಳಲ್ಲಿ ಹೊತ್ತಿಸಿಟ್ಟಿರುವ ಹಣತೆಯ ಕುಡಿದೀಪಗಳು, ಬರಿಯ ದೀಪಗಳಲ್ಲ. 'ಉರಿಯುತ್ತಿರುವ' ದೀಪಗಳು. ದೀಪದ ಪ್ರಭೆ ಗೂಡಿನಲ್ಲೆಲ್ಲಾ ತುಂಬಿ ತುಳುಕಿ ಹೊರಗೆ ಹರಿಯುತ್ತಿದೆ. ಆದರೂ ಹಣತೆಯ ದೀಪ, ಹೆಚ್ಚು ಪ್ರಕಾಶವಿಲ್ಲ. ಸ್ವಲ್ಪ ದೂರದಲ್ಲಿ, ದೇಗುಲದ ಮುಂದುಗಡೆ, ಅಶ್ವತ್ಥವೃಕ್ಷವೊಂದು ಮಸಕು ಮಸಕಾಗಿ ಕಾಣುತ್ತಿದೆ. ಈ ದೃಶ್ಯದ ಬಣ್ಣಕೌಶಲವನ್ನು ಮನಗಾಣಬೇಕಾದರೆ ಮೂಲ ಪ್ರತಿಯನ್ನೇ ನೋಡಬೇಕು. ಈಚೆಗೆ 'ರಂಗಭೂಮಿ'ಯಲ್ಲಿ ನರಳುತ್ತಾ ಬಿದ್ದಿರುವ ಛಿದ್ರಛಿದ್ರ ಪ್ರತಿಯನ್ನು ನೋಡಿದರೆ ಗೊತ್ತಾಗುವುದಿಲ್ಲ. ಆ ಚಿತ್ರದ ಬಣ್ಣಗೆಲಸವು ಅಷ್ಟು ಮನೋಹರವಾಗಿದ್ದರೂ ಚಿತ್ರದ ಸೌಂದರ್ಯವು ಬರಿಯ ಬಣ್ಣಗೆಲಸದಲ್ಲಿಲ್ಲ. ಇನ್ನೆಲ್ಲಿದೆ? ಒಬ್ಬಳು ಯುವತಿ, ಪೂಜಾ ಸಾಮಗ್ರಿಯೊಡನೆ ದೇವಸ್ಥಾನವನ್ನು ಪ್ರವೇಶಿಸುತ್ತಿದ್ದಾಳೆ. ಗಂಭೀರವಾದ, ಆದರೂ ಭಕ್ತಿಯುತವಾದ ಅವಳ ಮುಖಭಾವವು ಹಣತೆಯ ದೀಪದ ಬೆಳಕಿನಲ್ಲಿ ಎಷ್ಟು ವಿಶದವಾಗಿ ಪ್ರಕಾಶಿಸುತ್ತಿದೆ! ಇನ್ನು ಸ್ವಲ್ಪ ದೂರದಲ್ಲಿ ಒಬ್ಬ ವೃಥಕಾಯನು ಸಾಷ್ಟಾಂಗ ಪ್ರಣಾಮ ಮಾಡುತ್ತಿದ್ದಾನೆ! ಹೀಗೆ ಚಿತ್ರದಲ್ಲಿ ಇಬ್ಬರು ಭಕ್ತಶಿರೋಮಣಿಗಳು. ಈ ವ್ಯಕ್ತಿಗಳ ಚಿತ್ರದಲ್ಲೂ ಅಲ್ಲ ಸೌಂದರ್ಯವಿರುವುದು. ಅಲ್ಪವಾದ ಹಣತೆಯ ದೀಪದ ಅಗಾಧವಾದ ಜ್ಯೋತಿಯಲ್ಲಿ ಪೂರ್ಣ ಭಕ್ತಿಭಾವವು ಹೇಗೆ ಮಿಳಿತವಾಗಿದೆ! ಈ ಸಮ್ಮಿಳನದಲ್ಲಿಯೇ ಚಿತ್ರದ ಎಲ್ಲಾ ಸೌಂದರ್ಯ; ಈ ಸಮ್ಮಿಳನ ಪ್ರಕಾಶದಲ್ಲಿಯೇ ಚಿತ್ರಗಾರರ ವ್ಯಕ್ತಿತ್ವ ಪ್ರಕಾಶ; ಈ ಸಮ್ಮಿಳನದಲ್ಲಿಯೇ ಚಿತ್ರಗಾರರ ಕಲ್ಪನಾಶಕ್ತಿ,

ಊಹಾಶಕ್ತಿ, ಬುದ್ಧಿಶಕ್ತಿ, ಆತ್ಮಶಕ್ತಿ—ಇವೆಲ್ಲದರ ಆಡಕ! ಅತುಳ ಭಕ್ತಿಯೇ ಮೂರ್ತಿವೆತ್ತಂತಿದೆ—ಈ ಚಿತ್ರ! ಇದು ಭಕ್ತಿಭಾವದ ಚಿತ್ರವಲ್ಲ. ಭಕ್ತಿಭಾವದ ಪ್ರಪಂಚ! ಇಂತು ಈ ಚಿತ್ರವು ಶ್ರೇಷ್ಠಕಲೆಗೆ ಆದರ್ಶಪ್ರಾಯವಾದುದು.

ಹೀಗೆ-ಸಾಹಿತ್ಯವು ಹೇಗೆ ವಿಶ್ವರಹಸ್ಯದ ಒಂದು ಸಾಕ್ಷಾತ್ಕಾರವೂ ಒಂದು ಸಾಕ್ಷಾತ್ಕರಣವೂ ಆಗಿವೆಯೋ, ಹಾಗೆಯೇ ಚಿತ್ರಕಲೆಯೂ ವಿಶ್ವರಹಸ್ಯದ ಸಾಕ್ಷಾತ್ಕಾರವೂ, ಸಾಕ್ಷಾತ್ಕರಣವೂ ಆಗಿದೆ ಎಂಬುದನ್ನು ಸ್ವಲ್ಪಮಟ್ಟಿಗೆ ವಿವರಿಸಿದುದಾಯಿತು. ಅಂದರೆ, ಒಂದೇ ಭಾವಪ್ರಕಾಶಕ್ಕೆ ಸಾಹಿತ್ಯವೂ ಚಿತ್ರಕಲೆಯೂ ಎರಡು ಭಿನ್ನಮಾರ್ಗಗಳು ಎಂದು ಹೇಳಿದು ದಾಯಿತು. ಆದರೆ ಸಾಹಿತ್ಯದ ಕಾರ್ಯವೂ ಚಿತ್ರಕಲೆಯ ಕಾರ್ಯವೂ ಒಂದೇ ಎಂಬುದನ್ನು ನಿರ್ಧರಿಸಿಲ್ಲ. ಆದರೆ ಇಷ್ಟನ್ನು ಸ್ಥೂಲವಾಗಿ ಹೇಳಬಹುದು: ಸಾಧನ ಬೇರೆಯಾದರೂ, ಸ್ವರೂಪ ಬೇರೆಯಾದರೂ ಎರಡರ ಕಾರ್ಯ-ಪ್ರಪಂಚವೂ ಒಂದೇ, ನಮಗೆ ಎರಡರಿಂದಲೂ ಒಂದೇ ಉಪಯೋಗವಿದೆ. ಎರಡೂ ಬೇಕು. ಈ ಅಭಿಪ್ರಾಯವನ್ನು ಮುಂದೆ ತಿಳಿಸುತ್ತೇನೆ.

ಸಾಹಿತ್ಯವು ಎಷ್ಟರಮಟ್ಟಿಗೆ ಆನಂದದಾಯಕವೋ ಚಿತ್ರಕಲೆಯೂ ಅಷ್ಟೇ ಆನಂದದಾಯಕ. ಆದರೆ ಬರಿಯ ಆನಂದವನ್ನು ಕೊಡುವುದೇ ಅದರ ಮುಖ್ಯೋದ್ದೇಶವಾಗಿರಲಾರದು. ಚಿತ್ರಗಳು ಕೊಠಡಿಯ ಅಲಂಕಾರ ಕ್ಕಾಗಿಯೇ ಅಲ್ಲ: ಅವುಗಳ ಪ್ರಭಾವವು ಪ್ರತಿದಿನವೂ ನಮ್ಮಮೇಲೆ ಬಿದ್ದು ನಮ್ಮ ಭಾವಗಳು ಉತ್ತಮವಾಗಬೇಕು. ಆದರೆ ಚಿತ್ರಗಳೆಲ್ಲಾ ಅಷ್ಟು ಉತ್ತಮವಾಗಿಲ್ಲದಿರುವುದರಿಂದ, ಸಾಧಾರಣ ಚಿತ್ರಗಳ ವಿಷಯದಲ್ಲಿ ಏನು ಹೇಳುವುದು? ಅವು ಬರಿಯ ಅಲಂಕಾರ ವಸ್ತುಗಳು. ಅವುಗಳ ಅವಲೋಕನ ದಿಂದ ತಾತ್ಕಾಲಿಕ ಉಲ್ಲಾಸವುಂಟಾಗುತ್ತದೆ. ಅಷ್ಟೆ—ಎಂದು ಹೇಳಬಹುದು. ಆದರೆ ನಾನು ಹೇಳುವುದಿದು. ಅವುಗಳಿಂದಲೂ ನಮಗೆ ಉಪಯೋಗವಿದೆ. ಆ ಚಿತ್ರಗಳು ನಮ್ಮ ಭಾವಗಳನ್ನು ಉತ್ತಮಗೊಳಿಸದಿದ್ದರೂ, ಜೀವನದ ರಹಸ್ಯವನ್ನು ಪ್ರಕಟಿಸದಿದ್ದರೂ, ವಿಶ್ವರಹಸ್ಯವನ್ನು ಸಾಕ್ಷಾತ್ಕರಣ ಮಾಡಿ ತೋರದಿದ್ದರೂ, ನಮ್ಮ ಸೌಂದರ್ಯಾನುಭವಶಕ್ತಿಯನ್ನು (Sense of Beauty) ಹೆಚ್ಚಿಸುತ್ತವೆ. ಇದೂ ಒಂದು ಬಗೆಯ ಆತ್ಮಶೋಧನೆ. ನಮ್ಮಲ್ಲಿ ಸೌಂದರ್ಯಾನುಭವಶಕ್ತಿ ಹೆಚ್ಚಿದಹಾಗೆಲ್ಲಾ, ಆತ್ಮಕ್ಕೆ ಅಂಟಿಕೊಂಡು,

ಅವರ ಜ್ಯೋತಿಯನ್ನು ಮುಚ್ಚಿರುವ ಕಿಲುಬೆಲ್ಲಾ ತನಗೆ ತಾನೇ ತೊಳೆದು ಮಾಯವಾಗಿ ಆತ್ಮಸಂಸ್ಕಾರವಾಗುತ್ತದೆ. ಎಂದು ಆತ್ಮಸಂಸ್ಕಾರಕ್ಕೆ ಪ್ರಾರಂಭ ವಾಗುವುದೋ ಅಂದಿನಿಂದಲೇ ನಾವು ಜೀವನದ ಉದ್ದೇಶವನ್ನು ಸಾಧಿಸಲು ಪ್ರಯತ್ನಪಡುವುದು ಅಗತ್ಯವಾಗುತ್ತದೆ.

ಸಾಧಾರಣವಾಗಿ ಉತ್ತಮ ಚಿತ್ರಗಳ ಪ್ರಭಾವವೇ ಇಂತಾದಮೇಲೆ ಅತ್ಯುತ್ಕೃಷ್ಟ ಚಿತ್ರಗಳ ವಿಷಯವಾಗಿ ಹೆಚ್ಚು ಹೇಳಲೇ ಕೆಲಸವಿಲ್ಲ. ನಿಜವಾದ ಚಿತ್ರಗಾರನು ಕಲೆಯನ್ನು ಸಂಪೂರ್ಣ ಕೈವಶಮಾಡಿಕೊಳ್ಳಲು ಅನೇಕ ವರ್ಷ ಗಳ ಕಾಲ ನಿದ್ರಾಹಾರವನ್ನು ತ್ಯಜಿಸಿ ಕಷ್ಟಪಡುತ್ತಾನೆ. ಅದಕ್ಕಾಗಿ ತನ್ನ ಸ್ವಂತ ಸುಖವನ್ನು. ತನ್ನ ಸರ್ವಸ್ವವನ್ನೂ ಬಲಿಗೊಡುತ್ತಾನೆ. ಅದರ ಫಲವಾಗಿ ನಮಗೊಂದು ಉತ್ತಮ ಚಿತ್ರವನ್ನು ಕೊಟ್ಟು, ಉಲ್ಲಾಸ ಕೊಡು ತ್ತಾನೆ. ಸ್ವಾರ್ಥತ್ಯಾಗದಿಂದ ಕೊಡುವ ಈ ಉಲ್ಲಾಸದಲ್ಲಿ ಒಂದು ಮಹತ್ವ ವಿದೆ, ಪರಿಶುದ್ಧತೆಯಿದೆ.

ಸಾಹಿತ್ಯದಂತೆ ಚಿತ್ರಕಲೆಯೂ ಜಗಜ್ಜೀವನದ ಕೈಗನ್ನಡಿ. ಸಾಹಿತ್ಯದಲ್ಲಿ ವಿಸ್ತರಣೆ, ವಿವರಣೆ–ಇವಕ್ಕೆ ಅವಕಾಶವಿರುವುದರಿಂದ ಅನೇಕ ಘಟನೆಗಳನ್ನು, ಅನೇಕ ಭಾವಗಳನ್ನು ಏಕಕಾಲದಲ್ಲಿ ಪ್ರದರ್ಶಿಸುವುದು ಸುಲಭಸಾಧ್ಯ. ಆದರೆ ಚಿತ್ರಲೇಖಕ್ಕೆ ಒಂದು ದೊಡ್ಡ ಪ್ರತಿಬಂಧಕವಿದೆ. ಒಂದೇ ಚಿತ್ರದಲ್ಲಿ ಎಲ್ಲವನ್ನೂ ಏಕಕಾಲದಲ್ಲಿ ಪ್ರಕಟಿಸುವುದಕ್ಕಾಗುವುದಿಲ್ಲ. ಶಕುಂತಲೆಯ ಜೀವನಚರಿತ್ರೆಯನ್ನು, ಅವಳ ಪ್ರೇಮದ ಬೆಳವಣಿಗೆಯನ್ನು ಒಂದೇ ಕಾವ್ಯ ರೂಪವಾಗಿ ಬರೆಯಲು ಕಾಳಿದಾಸನಿಗೆ ಸಾಧ್ಯವಾಯಿತು. ಅದನ್ನೇ ಒಂದೇ ಚಿತ್ರದಲ್ಲಿ ತೋರಿಸುವುದು ಚಿತ್ರಗಾರನಿಗೆ ಆಗುವುದಿಲ್ಲ. ಶಕುಂತಲೆಯ ಜೀವನ ಘಟನೆಗಳಲ್ಲಿ ಅತ್ಯುತ್ತಮವಾದೊಂದನ್ನು ಮಾತ್ರ ಒಂದು ಚಿತ್ರದಲ್ಲಿ ಚಿತ್ರಗಾರನು ತೋರಿಸಬಹುದು. ಆ ಸ್ಥಳದಲ್ಲಿಯೂ ಕವಿಗಿರುವ ಸ್ವಾತಂತ್ರ್ಯವು ಚಿತ್ರಗಾರನಿಗಿಲ್ಲ. ಮಾತಿನ ಬರವಣಿಗೆಗಿಂತಲೂ ಬಣ್ಣದ ಬರವಣಿಗೆ ಕಷ್ಟ. ಶಕುಂತಲೆ ಕಣ್ವಾಶ್ರಮವನ್ನು ಬಿಟ್ಟು ಗಂಡನ ಮನೆಗೆ ಹೊರಡಬೇಕಾದಾಗ ಅವಳಲ್ಲಿ, ಕಣ್ವರಲ್ಲಿ, ಸಖಿಯರಲ್ಲಿ, ಕಡೆಗೆ ಆಶ್ರಮದ ಜಿಂಕೆಯಲ್ಲಿ, ವನತರು ಗಳಲ್ಲಿ ಮೂಡಿದ ಭಾವಗಳ ವೈಚಿತ್ರ್ಯ ವೈವಿಧ್ಯಗಳನ್ನು ಕಾಳಿದಾಸನು ಎಷ್ಟು ಮನೋಹರವಾಗಿ ಸೂಚಿಸಿದ್ದಾನೆ! ಅದೇ ಕೆಲಸವು ಚಿತ್ರಗಾರನಿಗೆ ಸ್ವಲ್ಪ ಅಸಾಧ್ಯ. ಆದರೂ ನಮ್ಮ ವೆಂಕಟಪ್ಪನವರು ಮೇಲೆ ಹೇಳಿದ ಸನ್ನಿವೇಶದಲ್ಲಿ ಶಕುಂತಲೆಯ ಚಿತ್ರವನ್ನು ಬಹಳ ಮುದ್ದಾಗಿ 'Plaster of Paris'ನಲ್ಲಿ

ಕೊರೆದಿರುವರಂತೆ! ಉತ್ತೀರ್ಣರಾಗಿರುವರಂತೆ! ಅದನ್ನು ನೋಡುವ ಅದೃಷ್ಟ ನನಗಿನ್ನೂ ಒದಗಿಲ್ಲ. ಸಾಹಿತ್ಯ ಚಿತ್ರಗಳ ಏಕತ್ವವನ್ನು ವೆಂಕಟಪ್ಪನವರು ಕಾರ್ಯತಃ ಸ್ಥಾಪಿಸಿರುತ್ತಾರೆ. ನನ್ನ ಲೇಖನವು ಬರಿಯ ಬುರುಡೆ, ಜಳ್ಳು!

ಉತ್ತಮ ಸಾಹಿತ್ಯವಾಗಲೀ ಚಿತ್ರಕಲೆಯಾಗಲೀ ವಾಚಕರ ಅಥವಾ ನೋಟಕರ ಕಲ್ಪನಾಶಕ್ತಿಯನ್ನು ಸೆಳೆಯುವ ಶಕ್ತಿಯುಳ್ಳದ್ದಾಗಿರಬೇಕು. ಒಳ್ಳೆಯ ಕಾವ್ಯವು ಓದುಗನಲ್ಲಿ ಅಡಗಿರುವ ಕಲ್ಪನಾಶಕ್ತಿಯನ್ನು ಚಾಟಿಯಿಂದ ಹೊಡೆದಂತೆ ಪೊಡೆದೆಬ್ಬಿಸುತ್ತದೆ. ಒಳ್ಳೆಯ ಚಿತ್ರಕ್ಕೂ ಆ ಶಕ್ತಿಯಿದೆ. ಯಾವ ಕಾವ್ಯವು ನಮ್ಮ ಕಲ್ಪನಾಶಕ್ತಿಯನ್ನು ಉದ್ರೇಕಗೊಳಿಸಿ ಆ ಮೂಲಕ ನಮ್ಮ ಹೃದಯವನ್ನು ಕಲಕುವುದಿಲ್ಲವೋ ಆ ಕಾವ್ಯವು ಉತ್ತಮ ಸಾಹಿತ್ಯದಲ್ಲಿ ಗಣನೆಗೆ ಬರುವುದಿಲ್ಲ. ಕೆಲವು ವೇಳೆ ಈ ಕಾರ್ಯವು ಕಾವ್ಯದಿಂದಾಗದೇ ಹೋದರೆ ಆ ಕಾವ್ಯವು ಉತ್ತಮವಲ್ಲವೆಂದರ್ಥವಲ್ಲ. ಕಾವ್ಯದಲ್ಲಿ ತಪ್ಪಿಲ್ಲ. ಓದುಗನಲ್ಲಿ ಏನೋ ತಪ್ಪಿರಬೇಕು. ಕೋಣನ ಮುಂದೆ ಕಿನ್ನರಿ ಬಾರಿಸಿ, ಕೋಣನಿಗೆ ಅದರಿಂದ ಉಲ್ಲಾಸವಾಗದೇ ಹೋದರೆ ಅದು ಕಿನ್ನರಿಯ ತಪ್ಪೆ?

ಸಾಹಿತ್ಯ, ಸಂಗೀತ, ಚಿತ್ರಕಲೆ—ಈ ಮೂರರಕ್ಕೂ ನಮ್ಮ ಕಲ್ಪನಾಶಕ್ತಿಯನ್ನು ಒಂದೊಂದು ವಿಧದಲ್ಲಿ ಕಾರ್ಯೋನ್ಮುಖವನ್ನಾಗಿ ಮಾಡುವ ಶಕ್ತಿಯಿದೆ. ಈ ವಿಷಯವನ್ನು ಬ್ರೌನಿಂಗ್ ಕವಿ ಹೀಗೆ ಹೇಳುತ್ತಾರೆ—

"What's poetry except a power that makes? And speaking to one sense, inspires the rest, Pressing them all into its service; so That who sees painting seems to hear as well The speech that's proper for the painted mouth; And who hears music, feels his solitude Peopled at once for how count heart-beats, plain Unless a company, with hearts which beat, Come close to the musician, seen or no? And who receives true vérse at eye or ear, Takes in (with verse) time, place, and person too, So, links each sense, on to its sister sense, Grace-like;........"

ಒಂದು ಕಾವ್ಯವನ್ನು ಓದಿದಾಗ ಆ ಕಾವ್ಯದ ಸನ್ನಿವೇಶ, ವ್ಯಕ್ತಿಗಳು, ಆ ಕಾವ್ಯಪ್ರಪಂಚವೇ ನಮ್ಮ ಚಿತ್ತಭಿತ್ತಿಯಲ್ಲಿ ಚಿತ್ರಿತವಾಗಬೇಕು ; ಅದೇ ನಿಜವಾದ ಕಾವ್ಯ. ಅದರಂತೆಯೇ, ಒಂದು ಚಿತ್ರವನ್ನು ನೋಡಿದಾಗ ಅದರಲ್ಲಿ ಕಾಣುವ ಗಿಡಮರಗಳು, ವ್ಯಕ್ತಿಗಳು ಎಲ್ಲವೂ ಸಜೀವವಾಗಿ ನಿಜವಾದ ಪ್ರಪಂಚದಲ್ಲಿರುವಂತೆ ಕಾಣಬೇಕು, ಅದೇ ನಿಜವಾದ ಚಿತ್ರ. ಒಂದು ವಿಧದಲ್ಲಿ ಸಂಗೀತವು ಇವೆರಡಕ್ಕೂ ಹೆಚ್ಚಿನ ಪ್ರಭಾವವುಳ್ಳದ್ದು. ಒಂದು ಕಾವ್ಯವನ್ನು ಓದಿದರೆ ಹೇಗೆ ನಮ್ಮ ಮನಸ್ಸಿಗೆ ಒಂದು ಚಿತ್ರ ಹೊಳೆಯುವುದೋ, ಒಂದು ಚಿತ್ರ ನೋಡಿದರೆ ಹೇಗೆ ಒಂದು ಹೊಸದೇ ಆದ ಪ್ರಪಂಚದಲ್ಲಿ ಸಂಚರಿಸುವೆವೊ – ಆ ಎರಡು ಶಕ್ತಿಗಳನ್ನೂ ಒಳಗೊಂಡ ಬೇರೊಂದು ಹೊಸ ಶಕ್ತಿಯ ಪ್ರಭಾವವು ಸಂಗೀತದಲ್ಲಿದೆ ! ಅದು ಬಹಳ ವಿಚಿತ್ರವಾದುದು ! ಸಂಗೀತವನ್ನು ಕೇಳುವಾಗ ನಮ್ಮ ಮನಸ್ಸಿನಲ್ಲಿ ಯಾವ ಚಿತ್ರವೂ ಕಾಣುವುದಿಲ್ಲ, ಯಾವ ವ್ಯಕ್ತಿಗಳೂ ಓಡಾಡುವುದಿಲ್ಲ ; ಸಂಗೀತದ ಭಾವದಲ್ಲಿ ತಲ್ಲೀನರಾಗಿಬಿಡುತ್ತೇವೆ. ಆ ಘಳಿಗೆಯಲ್ಲಿ ಸಂಗೀತಗಾರನಿಗೂ ನಮಗೂ ದೇಹಸಂಬಂಧವಾದ ಅಂತರವಿದೆ, ಅಷ್ಟೆ ; ನಾವೇ ಸಂಗೀತಗಾರರು ; ಸಂಗೀತಗಾರನೊಡನೆ ಅಳುತ್ತೇವೆ, ಆನಂದ ದಲ್ಲಿ ಮುಳುಗುತ್ತೇವೆ, ಕುಣಿಯುತ್ತೇವೆ !

ಹೀಗೆ ಚಿತ್ರಕಲೆಯೂ ಸಾಹಿತ್ಯವೂ ಬೇರೆ ಬೇರೆ ರೀತಿಯಿಂದ ಒಂದೇ ವಿಷಯವನ್ನು ಪ್ರತಿಪಾದಿಸಿ, ನಮ್ಮ ಕಲ್ಪನಾಶಕ್ತಿಯನ್ನು ಎಚ್ಚರಗೊಳಿಸಿ, ನಮ್ಮ ಹೃದಯವನ್ನು ಕಲಕಿ ಅಲ್ಲಿ ಹೊಸ ಭಾವಗಳನ್ನು ತುಂಬಿ, ನಮ್ಮ ಆತ್ಮವನ್ನು ತೊಳೆದು, ಬೆಳಗಿ, ಹೊಳೆಯುವಂತೆ ಮಾಡಿ ಕ್ರಿಯಾಶಕ್ತಿಗಳು ಎನ್ನಿಸಿಕೊಳ್ಳುತ್ತವೆ.

ಕಾವ್ಯವನ್ನು ಓದಿದರೆ ಹೇಗೆ ನಮಗೊಂದು ಚಿತ್ರವು ಕಾಣುತ್ತದೆ, ಚಿತ್ರವನ್ನು ನೋಡಿದಾಗ ಹೇಗೆ ಕಾವ್ಯದಿಂದ ಪಡೆಯುವ ಅನುಭವವನ್ನು ಪಡೆಯುತ್ತೇವೆ ಎಂಬುದನ್ನು ಒಂದೆರಡು ಉದಾಹರಣೆಗಳಿಂದ ಸ್ಪಷ್ಟಗೊಳಿಸುತ್ತೇನೆ. ಕೆಲವು ಕಾವ್ಯಭಾಗಗಳನ್ನು ಮಾತ್ರ ಉದಾಹರಿಸುತ್ತೇನೆ :

"ಆರಕ್ತಮಾದ ನೇಱಿಲ್ಗಂ ಕೊಕ್ಕಿಂ ಕರ್ದುಂಕಿ ಚಂಚೂಪುಟಮನೂಱಿ ಅರೆಗಣ್ಮುಚ್ಚಿ ಪಕ್ಷಯುಗ್ಮಂ ಸಂಚಳಿಸೆ ಮಧುರಾಸವಮಂ ಒರೆ ಪೀರ್ದು ತಣಿದುಂ ಸೊರ್ಕಿಂ ಗಱಿಪುವರಗಿಳಿಯ" ಈ ಚಿತ್ರವನ್ನು ನೋಡಿ. ಒಂದೆರಡು ಮಾತಿನಲ್ಲಿ ಎಂಥ ಸೊಗಸಾದ ಚಿತ್ರವನ್ನು ಕಣ್ಣಿಗೆ ಕಟ್ಟಿದಂತೆ ಚಿತ್ರಿಸುವ ಶಕ್ತಿ ಮುದ್ದಣನಿಗಿದೆ ! ಶ್ರೀನಿವಾಸರ "ಇಂದಿರೆಯೋ ? ಅಲ್ಲವೋ ?" ಎಂಬ

ಕಥೆಯ ಇಂದಿರೆಯ ಚಿತ್ರವನ್ನು ನೋಡಿ—“ಇಂದಿರೆಯು ಬಹಳ ಚೆಲುವೆ. ಸ್ವಲ್ಪ ಉದ್ದವಾದ ಮುಖ. ಹಾಲಕೆನೆಯಂತೆ ಮೃದುವಾದ ಬಿಳುಪಿನ ಸೊಬಗು ಹಣೆಯನ್ನು ತುಂಬಿತ್ತು. ಸೊಬಗು ಅಲ್ಲಿಂದ ಹುಬ್ಬುಗಳ ನಡುವೆ ಹರಿದು, ಕಣ್ಣುಗಳನ್ನು ಸೇರಿ, ಅಲ್ಲಿ ಮಲ್ಲಿಗೆಯಾಗಿರುವುದು. ಎಸಳಾದ ಮಲ್ಲಿಗೆ. ಅದರ ನಡುವೆ ಒಂದು ಕರಿಯ ತುಂಬಿ ಸಿಕ್ಕಿಕೊಂಡು ಅಲ್ಲಿಂದ ಬರಲಾರದೆ ಬಹು ಚಪಲದಿಂದ ಚಲಿಸುತ್ತಿರುವುದು. ಆ ತುಂಬಿಗೆ ಬಿಡು ತ್ತೇನೆ, ಬಿಡುವುದಿಲ್ಲ, ಎಂದು ಆಸೆ ತೋರಿಸುತ್ತಾ ಎರಡು ಸೊಗಸಾದ ಕಣ್ಣೆವೆಗಳು. ಮೂಗು ಸಣ್ಣದಾಗಿ ನೀಳವಾಗಿತ್ತು: ಮುದ್ದಾದ ಮೂಗು. ಮುದ್ದಾದ ಬಾಯಿ; ಸಣ್ಣಗೆ ಸ್ವಲ್ಪ ತೆರೆದ ಗುಲಾಬಿ ಹೂವಿನಂತಿತ್ತು. ಮುದ್ದಾದ ಗಲ್ಲ. ಬಾಯಲ್ಲಿ ಹಲ್ಲು ಸಾಲಿಟ್ಟ ಸಣ್ಣಕ್ಕಿಯಂತೆ ಇದ್ದುವು. ಸ್ವಲ್ಪ ಅರಿಶಿನ ಹಚ್ಚಿದ ಕೆನ್ನೆ. ಹಣೆಯಲ್ಲಿ ಹುಬ್ಬುಗಳ ನಡುವೆ ಸ್ವಲ್ಪ ಮೇಲೆ ಒಂದು ಸಣ್ಣ ಕುಂಕುಮದ ಬೊಟ್ಟು. ಒಟ್ಟಿನಲ್ಲಿ ಮುದ್ದಾದ ಮುಖ.”

ಇನ್ನು ಚಿತ್ರದ ವಿಷಯ—

ನಿಮ್ಮಲ್ಲನೇಕರು ವೆಂಕಟಪ್ಪನವರ ಸಿದ್ಧಾರ್ಥರಾಜ್ಯಪರಿತ್ಯಾಗದ ಪ್ರತಿ ಚಿತ್ರವನ್ನಾದರೂ ‘ಪ್ರಬುದ್ಧ ಕರ್ಣಾಟಕ’ದಲ್ಲಿ ನೋಡಿರಬಹುದು.—ಅಂತರ್ಗತ ವಾದ ಆ ಅರೆನೋಟ, ಮಾತನಾಡುವಂತೆ ಕಾಣುವ ಆ ಕೋಮಲವಾದ ತುಟಿ ಗಳು, ನಡೆಯುತ್ತಿರುವ ಭಂಗಿ, ಬಲಗೈಯ ರೀತಿ, ಪಕ್ಕದಲ್ಲಿ ಯಜಮಾನನ ಸೇವೆ ಮಾಡಲು ಸಿದ್ಧವಾಗಿರುವ ಕುದುರೆ—ಈ ಸನ್ನಿವೇಶವನ್ನು ನೋಡಿದರೆ, ಪ್ರಪಂಚದ ನಿಸ್ಸಾರವನ್ನು ಕುರಿತು ಸಿದ್ಧಾರ್ಥನು ಮಾತನಾಡುತ್ತಿರುವಂತೆ ಕಾಣುತ್ತದೆ; ಅವನ ಜೀವನ ಚರಿತ್ರೆ ಎಲ್ಲವೂ ಒಂದು ಕ್ಷಣಕಾಲ ಮಿಂಚಿನಂತೆ ಹೊಳೆದು ಮಾಯವಾಗುತ್ತದೆ.

ಹೀಗೆ ಸಾಹಿತ್ಯ ಚಿತ್ರಕಲೆ ಇವುಗಳ ದೇಹ, ವಸ್ತ್ರ ಮತ್ತು ಭೂಷಣ ಬೇರೆಯಾದರೂ ಎರಡರ ಜೀವವೂ ಒಂದೇ, ಎರಡರ ಕಾರ್ಯವೂ ಒಂದೇ; ಅದೇ ಇದು, ಇದೇ ಅದು.

---

## ಎಂ.ವಿ.ಸೀ. ಅವರ ಹೊಸ ಪುಸ್ತಕಗಳು

| | |
|---|---|
| ಮೊದಲ ಹೆಜ್ಜೆ (ಪದ್ಯಗಳು) | ರೂ. ೫-೦೦ |
| ಕನ್ನಡಮ್ಮನ ಕೊರಗು | ರೂ. ೮-೦೦ |
| ನಾಡೋಜ ಬಿ.ಎಂ.ಶ್ರೀ. | ರೂ. ೫-೦೦ |
| ಕನ್ನಡ ಜೈಮಿನಿ ಭಾರತ ಸಮೀಕ್ಷೆ | ರೂ. ೫-೦೦ |

### ಅಚ್ಚಿನಲ್ಲಿ

ಪ್ರತಿಮಾಗೃಹ (ಗುರುಹಿರಿಯರ ನುಡಿಚಿತ್ರಗಳು)

ಶ್ರೀ ಶಂಕರಾಚಾರ್ಯಕೃತ
ಸೌಂದರ್ಯಲಹರೀ (ಅನುವಾದ)

ರಾಘವ ಪ್ರಕಾಶನ
ಬೆಂಗಳೂರು-೧೯